ಶ್ರೀ

ಫಲಜ್ಯೋತಿಷ್ಯ ಜ್ಯೋತಿರ್ಮಾಲಾ : ನಕ್ಷತ್ರ : ೧೦

# ಆರೋಗ್ಯ ಜ್ಯೋತಿಷ್ಯ

( ಭಾಗ ೧ )

⊕

ಲೇಖಕರು :
ಎನ್. ಕೆ. ಜೋಗಳೇಕರ
ಧಾರವಾಡ – ೨

⊕

ಬೆಲೆ : ೧೨ ರೂಪಾಯಿ

ಪ್ರಕಾಶಕರು :
ಎನ್. ಕೆ. ಜೋಗಳೇಕರ
ಜ್ಯೋತಿಷ್ಯ ಕಾರ್ಯಾಲಯ,
ತೇಜಸ್ವಿನಗರ,
ಧಾರವಾಡ – ೨
೫೮೦ ೦೦೨

ದ್ವಿತೀಯ ಮುದ್ರಣ : ೧೯೮೧


ಮುದ್ರಕರು :
ಗೌರಾಂಬಿಕಾ ಹೊನ್ನಾಪುರಮಠ
ಚಂದ್ರೋದಯ ಮುದ್ರಣಾಲಯ,
ಧಾರವಾಡ – ೧

# ಅರ್ಪಣೆ

ಒಳ್ಳೆಯದಕ್ಕೆ ಒಳ್ಳೇಯದೆನ್ನುವ ಧೈರ್ಯಶಾಲಿ,
ಪ್ರತಿಭೆಯನ್ನು ಗುರುತಿಸಿ ಅದರ ಬೆಳವಣಿಗೆಗೆ ಸಹಕರಿಸುವ ಉದಾರಿ,
ಸಮಾಜ ಸೇವೆಗಾಗಿ ಜೀವನವನ್ನು ಸವೆಸುತ್ತಿರುವ ತ್ಯಾಗಿ,
ಸಾಹಿತಿಗಳ ಸಂಘಟನೆಗೆ ಶ್ರಮಿಸುತ್ತಿರುವ ಸಾಹಸಿ

**ನಾರಾಯಣಾಚಾರ್ಯ ಅ. ಹೊಸಕೇರಿ**

ಇವರಿಗೆ

ಅಭಿಮಾನಪೂರ್ವಕ

—ಲೇಖಕ

# ನಮ್ಮ-ನಿಮ್ಮ ಮಾತು

ಓಂ

" ಜಾತಕ ನೋಡಿ ರೋಗನಿದಾನ (Diagnosis) ಮಾಡುವದು ಸಾಧ್ಯ"— ಈ ಮಾತನ್ನು ನಾನು ಹೇಳಲು ೪ ವರ್ಷ ಕಾಲ ವೈದ್ಯಶಾಸ್ತ್ರ ಅಭ್ಯಾಸ ಮಾಡಿ ಅನುಭವ ಪಡಬೇಕಾಯಿತು. ಮನುಷ್ಯನ ಆರೋಗ್ಯ-ರೋಗಗಳಿಗೂ ಜ್ಯೋತಿಷ್ಯಕ್ಕೂ ಏನು ಸಂಬಂಧವಿದೆ ಎಂಬುದರ ಬಗ್ಗೆ ಸಂಶೋಧನೆ ಮಾಡಬೇಕೆಂಬ ಪ್ರೇರಣೆ ನನಗೆ ಬಂದಾಗ ಜ್ಯೋತಿಷ್ಯಶಾಸ್ತ್ರದ ಜ್ಞಾನದ ಜತೆಗೆ ವೈದ್ಯಕೀಯ ಶಾಸ್ತ್ರದ ಜ್ಞಾನವೂ ಬೇಕೆಂಬ ಅನುಭವ ಬಂದಿತು. ಆಗ ಹುಬ್ಬಳ್ಳಿಯ ಆಯುರ್ವೇದ ಕಾಲೇಜನ್ನು ಸೇರಿದೆ. "ಆರೋಗ್ಯ ಜ್ಯೋತಿಷ್ಯ" ಗ್ರಂಥ ಬರೆಯಲು ಇದು ನನ್ನ ಪ್ರಥಮ ಸಿದ್ಧತೆ (ತಯಾರಿಕೆ).

ಆಯುರ್ವೇದವನ್ನು ೪ ವರ್ಷ ಅಭ್ಯಾಸಮಾಡಿದಾಗ ಶರೀರ ರಚನೆ, ರೋಗಗಳ ಲಕ್ಷಣ, ರೋಗ ನಿದಾನ, ನಿವಾರಣೆಯ ಕ್ರಮ ಮೊದಲಾದ ವಿಷಯಗಳ ಜ್ಞಾನ ಲಭಿಸಿತು. ಈ ಜ್ಞಾನವನ್ನು ಜ್ಯೋತಿಷ್ಯಶಾಸ್ತ್ರದ ಚೌಕಟ್ಟಿನಲ್ಲಿ ಪವಣಿಸಿ,— ಪ್ರಯೋಗಿಸಿ " ಆರೋಗ್ಯ ಜ್ಯೋತಿಷ್ಯ " ವನ್ನು ಬರೆಯಲು ಉಪಕ್ರಮಿಸಿದೆ.

ಈ ಚಿಕ್ಕ ಹೊತ್ತಗೆಯಲ್ಲಿ ಜ್ಯೋತಿಷ್ಯಶಾಸ್ತ್ರ – ಆರೋಗ್ಯಶಾಸ್ತ್ರಗಳ ಸಂಯೋಗ-ಮಾಡುವಾಗ ಜಾತಕನಿಗೆ ರೋಗ ಯಾವಾಗ ಬರುತ್ತದೆ, ಹಾಗೂ ಬಂದ ರೋಗ ಯಾವಾಗ ಗುಣಮುಖವಾಗುವದು, ಯಾವ ಜಾತಕನಿಗೆ ಯಾವ ರೋಗ, ಯಾವಾವಾಗ ಬರುತ್ತದೆ ಮುಂತಾದ ಕ್ಲಿಷ್ಟ ಸಮಸ್ಯೆಗಳಿಗೂ ಕಳೆದ ಇಪ್ಪತ್ತು ವರುಷಗಳ ಜ್ಯೋತಿಷ್ಯ ವೃತ್ತಿಯ ಅನುಭವ, ವೈದ್ಯಕೀಯ ಶಾಸ್ತ್ರದ ಅಭ್ಯಾಸ ಹಾಗೂ ಈ ಅಭ್ಯಾಸದ ಕಾಲದಲ್ಲಿ ಆಸ್ಪತ್ರೆಯ ಕೆಲಸ ಇದ್ದಾಗ (Hospital duty) ರೋಗಿಗಳ ಜಾತಕ, ರೋಗಗಳ ತುಲನಾತ್ಮಕ ಅಭ್ಯಾಸ ಇವೇ ಬಹಳಷ್ಟು ಸಹಾಯಕವಾಗಿವೆ. ಇವು ನನ್ನ ಮಾತುಗಳಾದವು. ಇನ್ನು ನಿಮ್ಮ ಮಾತಿಗೆ ಬರೋಣ.

ನಾನಂತೂ ನನ್ನ ಅಭ್ಯಾಸ, ಅನುಭವ, ಸಂಶೋಧನೆಗಳ ಫಲವಾಗಿ ರೂಪುಗೊಂಡ ಸಿದ್ಧನಿಯಮಗಳ ವಿಶ್ಲೇಷಣೆಯನ್ನು ಬರೆದಿದ್ದೇನೆ. ಆದರೆ ಈ ನನ್ನ ಸಿದ್ಧ ಅನುಭವಗಳು ನಿಮ್ಮ ಪ್ರಯೋಗಕ್ಕ್ಕ ನಿಲುಕಿ ಅವು ನಿಮಗೂ ಅನುಭವಸಿದ್ಧವಾದರೆ, ಆಗ ಈ ನನ್ನ ವಿವರಣೆಯು ಶಾಸ್ತ್ರಬದ್ಧವೆಂದು ನಿರ್ಧರಿಸಲಾದೀತು. ಈ ದೃಷ್ಟಿಯಿಂದ ನೀವು ಈ ಪುಸ್ತಕದಲ್ಲಿಯ ನಿಯಮ ಗಳನ್ನು ಪ್ರಯೋಗಮಾಡಿದಾಗ ಯಾವುದಾದರೊಂದು ನ್ಯೂನತೆಯನ್ನು ಕಂಡರೆ ಆ ನ್ಯೂನತೆಯ ವಿವರಣೆಯನ್ನು ನನಗೆ ಬರೆದು ತಿಳಿಸಬೇಕೆಂದು ವಿನಂತಿಸುತ್ತೇನೆ. ಈ ನಿಮ್ಮ ಸಲಹೆ-ಸೂಚನೆ-ಟೀಕೆ ಸೂಕ್ತವೆನಿಸಿದರೆ, ಈ ಪುಸ್ತಕದ ಮುಂದಿನ ಆವೃತ್ತಿಗಳಲ್ಲಿ ತಿದ್ದುಪಡಿ ಮಾಡಲು ಪ್ರಯತ್ನಿಸುವೆ.

ಇದು ನನ್ನ ಫಲ ಜ್ಯೋತಿಷ್ಯ ಜ್ಯೋತಿರ್ಮಾಲೆಯ ೧೦ನೆಯ ನಕ್ಷತ್ರವು. ಈ ಕೃತಿ ರಚನೆಗೆ ಸಲಹೆ-ಸೂಚನೆಗಳನ್ನಿತ್ತು ಸಹಕರಿಸಿದ ಆಯುರ್ವೇದ ಕಾಲೇಜಿನ ಪ್ರಾಧ್ಯಾಪಕರಾದ ಡಾ॥ ಎಸ್. ರಾಘವೇಂದ್ರ, ಧಾರವಾಡದ ಡಾ॥ ಎನ್. ಬಿ. ಸಿದ್ಧಾಂತಿ, ಡಾ॥ ಎ. ಆರ್. ಗುಣಾರಿ ಹಾಗೂ ಡಾ॥ ವ್ಹಿ. ಎಚ್. ಮೊರಬ ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಕರಡು ಪ್ರತಿಯನ್ನು ತಯಾರಿಸಲು ಸಹಕರಿಸಿದ ಮಿತ್ರರಾದ ಶ್ರೀ ಕೆ. ಎಸ್. ಶರ್ಮಾ ಹಾಗೂ ಶ್ರೀ ಎಸ್. ಜಿ. ಜಯಮಂಗಲ ಇವರ ಸಹಾಯ ಮರೆಯಲಾರೆನು. ತಮ್ಮ ಕಲಾ-ನಿಪುಣತೆಯಿಂದ ಮುಖಪುಟಕ್ಕೆ ಸುಂದರ ಸೊಬಗನ್ನು ಒದಗಿಸಿದ ಕಲಾವಿದ ಶ್ರೀ ಕೆ. ಬಿ. ಕುಲಕರ್ಣಿಯವರಿಗೆ ನಾನು ಋಣಿ. ಈ ನನ್ನ ಗ್ರಂಥವನ್ನು ಅರ್ಪಣೆ ಮಾಡಲು ಅನುಮತಿಕೊಟ್ಟ ನಾ.ಅ. ಹೊಸಕೇರಿಯವರ ಅಭಿಮಾನ ಚಿರಸ್ಮರಣೀಯ; ಸಕಾಲಕ್ಕೆ ಚೊಕ್ಕಟವಾಗಿ ಮುದ್ರಿಸಿ ಉಪಕರಿಸಿದ ಫಾಣೇಕರ ಬಂಧುದ್ವಯರಾದ ಶ್ರೀ ಮನೋಹರ ಹಾಗೂ ರವೀಂದ್ರರನ್ನು ಸಹ ನೆನೆಸುತ್ತೇನೆ.

ಇಂತೀ ತಮ್ಮವನಾದ,

೧೫-೦೨-೧೯೭೭

ಎನ್. ಕೆ. ಜೋಗಳೇಕರ

ಧಾರವಾಡ

# ಎರಡನೆಯ ಆವೃತ್ತಿ

೦

"ಆರೋಗ್ಯ ಜ್ಯೋತಿಷ್ಯ" ಪುಸ್ತಕದ ಮೊದಲ ಮುದ್ರಣದ ಪ್ರತಿಗಳು ಮುಗಿದು ಹಲವು ವರುಷಗಳಾಗಿದ್ದು ಅನೇಕ ಜನರಿಂದ ಪ್ರತಿಗಳಿಗಾಗಿ ಬೇಡಿಕೆ ಹೆಚ್ಚಿಗೆ ಬಂದಿದ್ದರೂ ಸಹ ಈ ವರೆಗೆ ದ್ವಿತೀಯ ಮುಣ್ರಣವನ್ನು ಕೈಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಚಂದ್ರೋದಯ ಮುದ್ರಣಾಲಯದ ಶ್ರೀ ಚಂ.ಗ. ಹೊನ್ನಾಪುರಮಠ ವಕೀಲರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲುತ್ತದೆ. ಇವರು ಕೇವಲ ಮುದ್ರಕರಾಗಿರದೆ ನನ್ನ ಆತ್ಮೀಯ ಹಿರಿಯ ಸ್ನೇಹಿತರಿದ್ದು ಪ್ರಥಮ ಮುದ್ರಣದಲ್ಲಿದ್ದ ಅನೇಕ ಮುದ್ರಣ ದೋಷಗಳನ್ನು ತಿದ್ದುವುದರಲ್ಲಿಯೂ ಸಹಕರಿಸಿದ್ದಾರೆ. ಅದಕ್ಕಾಗಿ ಅವರನ್ನು ಮತ್ತೊಮ್ಮೆ ಸ್ಮರಿಸುವೆ. ಈ ಗ್ರಂಥದ ರಕ್ಷಾಕವಚವನ್ನ ಮುದ್ರಿಸಿಕೊಟ್ಟ ಕೃಪಾ ಮುದ್ರಣಾಲಯದ ಒಡೆಯರೂ ನನ್ನ ಆತ್ಮೀಯ ಮಿತ್ರರೂ ಆದ ಶ್ರೀ ಎನ್. ಕೆ. ಪೋತ್ನಿಸರಿಗೂ ಕೃತಜ್ಞತೆಗಳು. ಈ ಹೊತ್ತಗೆಗೆ ಅಂದವಾದ ಮುಖಚಿತ್ರವನ್ನು ತಯಾರಿಸಿಕೊಟ್ಟ ಜಿ. ಕೆ. ಮೂರ್ತಿಯವರಿಗೂ, ಪಡಿಯಚ್ಚನ್ನು ತಯಾರಿಸಿದ ಶಾರದಾ ಪ್ರೊಸೆಸ್ ಸ್ಟುಡಿಯೋದ ಶ್ರೀ. ಮಲಕಾಯಿಯವರಿಗೂ ಋಣಿ.

೧-೧೧-೧೯೮೧ | ಎನ್. ಕೆ. ಜೋಗಳೇಕರ
(ರಾಜ್ಯೋತ್ಸವ ದಿನ) | ತೇಜಸ್ವಿನಗರ, ಧಾರವಾಡ - ೨

# ಪರಿವಿಡಿ




| ಅಧ್ಯಾಯ | ವಿಷಯ | ಪುಟ |
|---|---|---|
| | ವಿಷಯ ಪ್ರವೇಶ | ೧ |
| ೧. | **ಶರೀರ ಜ್ಯೋತಿಷ್ಯ** | ೪ |
| | ದ್ವಾದಶ ಸ್ಥಾನಗಳಿಂದ ಅಂಗ ವಿಭಾಗ, ಅಂಗಾಂಗಗಳ ಮೇಲೆ ಗ್ರಹಗಳ ಪ್ರಭುತ್ವ, ಅಂಗಾಂಗಗಳ ಮೇಲೆ ರಾಶಿಗಳ ಪ್ರಭಾವ, ರಚನಾತ್ಮಕ ಶರೀರ ಬಂಧ. | |
| ೨. | **ಗ್ರಹ, ರಾಶಿ, ಸ್ಥಾನಾದಿಗಳ ವಿಚಾರ** | ೧೧ |
| | ರಾಶಿಗಳಿಂದ ರೋಗಗಳ ವಿಚಾರ, ಗ್ರಹಗಳಿಂದ ರೋಗಗಳ ವಿಚಾರ, ಸ್ಥಾನಗಳಿಂದ ರೋಗಗಳ ವಿಚಾರ, ತ್ರಿದೋಷದ ವಿಷಯವಾಗಿ ಗ್ರಹಗಳ ಸಂಬಂಧ. | |
| ೩. | **ಆಯುರ್ದಾಯ ವಿಚಾರ** | ೨೭ |
| | ಆಯುರ್ದಾಯದಲ್ಲಿಯ ಪ್ರಕಾರಗಳು, ದುರ್ಮರಣದಲ್ಲಿಯ ಪ್ರಕಾರಗಳು, ದುರ್ಮರಣ ಕಾರಕ ಯೋಗಗಳು, ಮರಣ ಹೇಗಾಗುವದು?, ಬಾಲಾರಿಷ್ಟ ಯೋಗಗಳು. | |
| ೪. | **ರೋಗಗಳ ವಿಚಾರ** | ೩೮ |
| | ಬಾಲಗ್ರಹ, ಮುಡುದೋಷ, ಕೋಡಿಗ್ಗೆಮ್ಮು, ಘಟಸರ್ಪ (ಗಂಟಲುಬೇನೆ), ಪೋಲಿಯೊ, ಮಸ್ತಿಷ್ಕಾವರಣದಾಹ (ಮೆನಿಂಜಾಯಿಟಿಸ್), ಮಂಗನ ಬಾವು, ಯಕೃತ್ ದೋಷ, ಮಲೇರಿಯಾ, ಟಾಯಫಾಯಿಡ, ನಿಮೋನಿಯಾ, ಫ್ಲು, | |

ಮೈಲಿಬೇನೆ, ಗೊಬ್ಬರ, ಕಾಲರಾ, ಪ್ಲೇಗ, ಅಪೆಂಡಿಸೈಟಿಸ್, ಆಮ್ಲಪಿತ್ತ, ಆಮಾಶಯಗತ ವ್ರಣ, ಆಂತ್ರಿಕದಲ್ಲಿಯ ವ್ರಣ, ಬ್ಲಡ್‌ಪ್ರೆಶರ, ರಕ್ತಪಿತ್ತ, ನೆಗಡಿ-ಕೆಮ್ಮು-ದಮ್ಮು, ಹೃದ್ರೋಗ, ರಾಜಯಕ್ಷ್ಮ (ಕ್ಷಯ), ಪಾಂಡುರೋಗ, ಕಾಮಣಿ, ಮಧು-ಮೇಹ, ಪ್ರಮೇಹ, ಉಪದಂಶ, ಪರಮಾ, ಮೂಲವ್ಯಾಧಿ, ಜಲೋದರ, ಕ್ಯಾನ್ಸರ, ಮೂತ್ರಾಶ್ಮರಿ, ಮೂತ್ರಕೃಚ್ಛ್ರ, ಉರಿಮೂತ್ರ, ಹರ್ನಿಯಾ, ವೃಷಣ ವೃದ್ಧಿ, ಸಂಧಿವಾತ, ಆಮವಾತ, ವಾತರಕ್ತ, ಗೃಧ್ರಸೀವಾತ, ಪಕ್ಷಾಘಾತ, ಧನು-ರ್ವಾತ, ಉನ್ಮಾದ, ಅಪಸ್ಮಾರ, ಮೂರ್ಛಾ, ಸನ್ಯಾಸ, ಅಲರ್ಜಿ, ಅಪಚನ-ಅಗ್ನಿಮಾಂದ್ಯ, ಹೊಟ್ಟೆನೋವು, ಅತಿ-ಸಾರ, ಆಮಾಂಶ, ನೇತ್ರವಿಕಾರ, ಕರ್ಣವಿಕಾರ, ನಾಸಿಕಾ-ವಿಕಾರ, ದಂತವಿಕಾರ, ವಾಣಿವಿಕಾರ, ಹುಗುಳು, ಕಿರುನಾಲಿಗೆ ಬೀಳುವಿಕೆ, ಸ್ವರವಿಕಾರ, ತ್ವಚೆ ರೋಗಗಳು, ವ್ರಣಗಳು, ಸ್ತ್ರೀ ರೋಗಗಳು.

೫. **ಅನುಭವಸಿದ್ಧ ನಿಯಮಗಳು** ೧೫೦

೬. **ಮುಹೂರ್ತಾದಿ ವಿಚಾರ** ೧೫೭

ಔಷಧ ಸೇವಿಸುವ ಕಾಲ, ಶಸ್ತ್ರಕ್ರಿಯೆಗಳಿಗಾಗಿ ಉತ್ತಮ ಮುಹೂರ್ತಗಳು, ಶಸ್ತ್ರಚಿಕಿತ್ಸೆಯ ಮೇಲೆ ಚಂದ್ರನ ಪರಿಣಾಮ, ರೋಗನಿವಾರಣೆ ಎಂದು? ರೋಗನಿವಾರಣೆಯ ಕಾಲ ಯಾವುದು?

---

॥ ಶ್ರೀ ॥

# ಆರೋಗ್ಯ ಜ್ಯೋತಿಷ್ಯ

卐

## ವಿಷಯ ಪ್ರವೇಶ

"ಆರೋಗ್ಯ ಜ್ಯೋತಿಷ್ಯ" ಎಂಬ ಹೆಸರು ನೋಡಿದಾಗ ಅನೇಕರಿಗೆ ಆಶ್ಚರ್ಯವಾಗಬಹುದು. "ಆರೋಗ್ಯ ಜ್ಯೋತಿಷ್ಯ ಇರುವ ಹಾಗೆ ಅನಾರೋಗ್ಯ ಜ್ಯೋತಿಷ್ಯ ಇರಬಾರದೇಕೆ ?" ಎಂಬ ಪ್ರಶ್ನೆ ಉದ್ಭವಿಸುವದು. ಈ ವಿಷಯ ಗಹನವಾದದ್ದು. ಇಲ್ಲಿ ಆರೋಗ್ಯ ಜ್ಯೋತಿಷ್ಯ ಎಂದಾಗ ಜ್ಯೋತಿಷ್ಯ ಪದವನ್ನು "ಆರೋಗ್ಯ" ಪದಕ್ಕೆ ವಿಶೇಷಣವಾಗಿ ಬಳಸಲಾಗಿಲ್ಲ. ಜ್ಯೋತಿಷ್ಯದಲ್ಲಿ ಆರೋಗ್ಯವಾದವು, ಅನಾರೋಗ್ಯವಾದವುಗಳ ಬಗೆಗೆ ಇಲ್ಲಿ ವಿವೇಚನೆಮಾಡಲಾಗಿಲ್ಲ. ಆದರೆ ಮಾನವರ ಆರೋಗ್ಯದ ಬಗೆಗೆ ಜ್ಯೋತಿಷ್ಯಶಾಸ್ತ್ರಕ್ಕೆ ಸಂಬಂಧವೇನು ? ರೋಗ-ಆರೋಗ್ಯ ಇವು ಕೇವಲ ವೈದ್ಯ ಶಾಸ್ತ್ರಜ್ಞರಿಗೆ ಮೀಸಲಾದ ವಿಷಯವೇ ? ಅಥವಾ ಇದರಲ್ಲಿ ಮನಶ್ಶಾಸ್ತ್ರಜ್ಞರಿಗೆ ಇರುವಂತೆ ಜ್ಯೋತಿಷ್ಯಶಾಸ್ತ್ರಜ್ಞರಿಗೂ ಒಂದು ಮಹತ್ತ್ವದ ಸ್ಥಾನವಿದೆಯೇ? ಇದ್ದರೆ ಎಂತಹ ಸ್ಥಾನ? ಎಷ್ಟರಮಟ್ಟಿಗೆ ಮಾನವನ ಆರೋಗ್ಯಕ್ಕೂ ಜ್ಯೋತಿಷ್ಯ ಶಾಸ್ತ್ರಕ್ಕೂ ಸಂಬಂಧವಿದೆ ? ಇವೇ ಮೊದಲಾದ ವಿಷಯಗಳ ವಿವೇಚನೆಯೇ "ಆರೋಗ್ಯ ಜ್ಯೋತಿಷ್ಯ"ದ ಉದ್ದೇಶವಿರುತ್ತದೆ.

ನನ್ನ ಅನೇಕ ಪುಸ್ತಕಗಳು ನನ್ನ ವೃತ್ತಿಯಲ್ಲಿ ನನಗೆ ಬಂದ ಅನೇಕಾನೇಕ ಕ್ಲಿಷ್ಟ ಸಮಸ್ಯೆಗಳ ಪರಿಹಾರಾನ್ವೇಷಣೆಯಲ್ಲಿಯೇ ರೂಪಗೊಂಡವು ಎಂದು ಹೇಳಿದರೆ ತಪ್ಪಾಗಲಾರದು. ಈ ಪ್ರಸ್ತುತ ಗ್ರಂಥ ಜ್ಯೋತಿಷ್ಯಶಾಸ್ತ್ರದ ಪ್ರಯೋಗದಲ್ಲಿ ಮಾನವನ ದೈಹಿಕ-ಮಾನಸಿಕ, ಆರೋಗ್ಯ—ಅನಾರೋಗ್ಯಗಳ ಬಗೆಗೆ ನನಗೆ ಉದ್ಭವಿಸಿದ ಕೆಲವು ವಿಚಿತ್ರ ಸಮಸ್ಯೆಗಳಿಂದ ಜನ್ಮತಾಳಿದೆ.

ನನ್ನ ಪೃಚ್ಛಕರು ಕೇಳಿದ ಕೆಲವು ಸಮಸ್ಯೆಗಳ ಉದಾಹರಣೆಗಳನ್ನು ಇಲ್ಲಿ ನೀಡಿದರೆ ಈ ಸಮಸ್ಯೆಗಳ ಕ್ಲಿಷ್ಟತೆಯ—ಜಟಿಲತೆಯ ಅರಿವಾದೀತು.

"ನನ್ನ ರೋಗ ಗುಣವಾದೀತೇ ? ಆಗುವದಾದರೆ ಎಂದು?" ಎಂಬ ಸಾಧಾರಣ ಪ್ರಶ್ನೆಯಿಂದ ಹಿಡಿದು "ನಾನು ನನ್ನ ರೋಗದ ಬಗ್ಗೆ ಇಬ್ಬರು ತಜ್ಞ ಡಾಕ್ಟರರನ್ನು ವಿಚಾರಿಸಿದೆ. ನನ್ನನ್ನು ಪರೀಕ್ಷಿಸಿದ ಒಬ್ಬರು ಶಸ್ತ್ರ ಚಿಕಿತ್ಸೆಯ ಸಲಹೆ ನೀಡಿದರು; ಇನ್ನೊಬ್ಬರು ಔಷಧದಿಂದಲೇ ಗುಣಮುಖ ವಾಗುವದೆಂದರು. ನಾನು ಯಾವ ತಜ್ಞರ ಸಲಹೆ ಪಾಲಿಸಲಿ?", "ನಾನು ಅಪೆಂಡಿಸೈಟಿಸ್‌ದಿಂದ (Appendicitis) ಬಳಲುತ್ತಿದ್ದೇನೆ. ಡಾಕ್ಟರರಲ್ಲಿ ಶಸ್ತ್ರಚಿಕಿತ್ಸೆಗೆ ಹೋಗಲೆ, ಅಥವಾ ವೈದ್ಯರಿಂದ ಚಿಕಿತ್ಸೆ ಪಡೆಯಲೆ?" "ನಾನು ಕೆಲಕಾಲದಿಂದ ಕ್ಷೀಣಿಸತೊಡಗಿದ್ದೇನೆ. ಕೆಲವರು ಗ್ರಹಕಾಟವೆಂತಲೂ, ಮತ್ತೊಬ್ಬರು ಗ್ರಹಕಾಟವೆಂತಲೂ, ಇನ್ನೊಬ್ಬರು ಗರಕಾಟವೆಂತಲೂ ಎನ್ನುತ್ತಾರೆ. ಡಾಕ್ಟರರು ಕ್ಷಯರೋಗವೆನ್ನುತ್ತಾರೆ. ಇನ್ನೊಬ್ಬರು ಇದು ಮಾಟ, ಮದ್ದುಗಳ ಪರಿಣಾಮವೆನ್ನುತ್ತಾರೆ; ಆದುದರಿಂದ ಯಾವ ಬಾಧೆ? ಹೇಳಿ, ಯಾವ ಚಿಕಿತ್ಸೆ ಪಡೆಯಲಿ ?", "ನನ್ನ ರೋಗಕ್ಕೆ ಗಾವಠಿ ಔಷಧ (ಗಿಡ ಮೂಲಿಕಾ ವನಸ್ಪತಿಯ ಚಿಕಿತ್ಸೆ) ತೆಗೆದುಕೊಳ್ಳಲೋ ಅಥವಾ ಅಲೋಪಥಿ ಔಷಧದಿಂದ ಚಿಕಿತ್ಸೆ ಪಡೆಯಲೊ ?", "ನನ್ನನ್ನು ಪರೀಕ್ಷಿಸಿದ ಒಬ್ಬ ತಜ್ಞ ಡಾಕ್ಟರರು ಇದು ಕ್ಷಯರೋಗವೆನ್ನುತ್ತಾರೆ. ಮತ್ತೊಬ್ಬರು ಇದು ಕೇವಲ ಅಶಕ್ತತೆಯೆನ್ನುವರು. ಯಾವದು ಸರಿ ?" ಇವೇ ಮೊದಲಾದ ರೋಗಿ ಹಾಗೂ ರೋಗದ ವಿಷಯವಾಗಿ ಸಮಸ್ಯೆಗಳನ್ನು ಬಿಡಿಸಬೇಕಾಗುತ್ತದೆ.

ಇಂತಹ ಕ್ಲಿಷ್ಟತೆಯಲ್ಲಿ ತೊಡಗಿದಾಗ ನಮ್ಮ ಪರಂಪರಾಗತ ಜ್ಯೋತಿಷ್ಯ ಗ್ರಂಥಗಳು ಪರಿಹಾರ ಕ್ರಮ ಒದಗಿಸದಾಗ ಮಾಡುವದೇನು ? ಇದರಿಂದ ನನ್ನದೇ ಆದ ಸಂಶೋಧನೆ, ಪರಿಶೀಲನೆ, ಅನುಭವಗಳ ಆಧಾರ ಮೊದಲಾದವುಗಳ ಸಹಾಯದಿಂದ ಮಾನವನ ಆರೋಗ್ಯಕ್ಕೂ, ಜ್ಯೋತಿಷ್ಯ ಶಾಸ್ತ್ರಕ್ಕೂ ಇರುವ ಸಂಬಂಧವನ್ನು ಇಲ್ಲಿ ಪ್ರತಿಪಾದಿಸಲು ಪ್ರಯತ್ನಿಸಿದ್ದೇನೆ.

ಗ್ರಹಗಳು ಮಾನವನ ಆಗು-ಹೋಗುಗಳನ್ನು ನಿಯಂತ್ರಿಸುತ್ತವೆ ಎಂದು ನಂಬಿದಾಗ ಯಾವ ಗ್ರಹಗಳು ಹೇಗೆ, ಯಾರನ್ನು ನಿಯಂತ್ರಿಸುತ್ತವೆ

ಎಂಬುದರ ಸಾಮಾನ್ಯ ಆಧಾರದ ಮೇಲೆ ಪ್ರತಿಯೊಬ್ಬ ವ್ಯಕ್ತಿಯ ಜಾತಕದ ಮೇಲಿಂದ ಅವರವರ ಆರೋಗ್ಯಕ್ಕೆ, ಅನಾರೋಗ್ಯಕ್ಕೆ ಗ್ರಹಗಳು ಕಾರಣೀಭೂತವಾಗುವವು ಎಂಬುದನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

"ಆರೋಗ್ಯ ಜ್ಯೋತಿಷ್ಯ"ದ ಈ ಸಂಪುಟದಲ್ಲಿ ೬ ಭಾಗಗಳನ್ನಾಗಿ ಮಾಡಿದೆ. ಪ್ರಥಮ ಪ್ರಕರಣದಲ್ಲಿ ದೇಹರಚನೆ ಹಾಗೂ ಗ್ರಹಗಳ ನಿಯಂತ್ರಣದ ಬಗೆಗೆ ವಿವೇಚಿಸುವ ಶರೀರ ಜ್ಯೋತಿಷ್ಯ, ಎರಡನೆಯದರಲ್ಲಿ ಭಿನ್ನ ಭಿನ್ನ ಗ್ರಹಗಳ, ರಾಶಿಗಳ, ಸ್ಥಾನಗಳಿಂದ ರೋಗದ ಕಲ್ಪನೆ; ಮೂರನೆಯ ಪ್ರಕರಣದಲ್ಲಿ ಆಯುರ್ದಾಯ ವಿಚಾರ; ನಾಲ್ಕನೆಯ ಪ್ರಕರಣದಲ್ಲಿ ವಿವಿಧ ರೋಗಗಳನ್ನು ತೆಗೆದುಕೊಂಡು ಪ್ರತಿಯೊಂದು ರೋಗದ ವಿಷಯವಾಗಿ ಜ್ಯೋತಿಷ್ಯದ ಭಾಷೆಯಿರುವ ಸುದೀರ್ಘವಾದ ರೋಗ ವಿಚಾರ ಎಂಬ ಪ್ರಕರಣ; ಐದನೆಯದರಲ್ಲಿ ವೃತ್ತಿ-ಬಾಂಧವರಿಗೆ ಅನುಕೂಲವಾಗುವ ಮಾರ್ಗದರ್ಶನದ ನಿಯಮಗಳನ್ನೊಳಗೊಂಡ ಅನುಭವಿಕ ನಿಯಮಗಳು; ಹಾಗೂ ಕೊನೆಯ ಪ್ರಕರಣದಲ್ಲಿ ರೋಗ ನಿವಾರಣೆಗಾಗಿ ಅನುಕೂಲವಾಗುವ ಮುಹೂರ್ತಗಳ— ವಿಚಾರ ಹೀಗೆ ಆರು ಪ್ರಕರಣಗಳನ್ನೊಳಗೊಂಡ ಪ್ರಥಮ ಸಂಪುಟವನ್ನು ಈ ಹೊತ್ತಗೆಯು ಒಳಗೊಂಡಿದೆ.

---

## ೧

# ಶರೀರ ಜ್ಯೋತಿಷ್ಯ

ವೈದ್ಯಶಾಸ್ತ್ರಕ್ಕೆ ಶರೀರವಿಜ್ಞಾನವೇ ಆಧಾರ. ಶರೀರದ ರಚನಾಕ್ರಮ, ಯಾವ ಯಾವ ಅಂಗ ಹೇಗೆ ಹೇಗೆ ಹೊಂದಿಕೊಂಡು ಶರೀರದ ಕ್ರಿಯೆಗಳನ್ನು ನಿಯಂತ್ರಿಸುತ್ತದೆ ಎಂಬುದರ ಅಭ್ಯಾಸ ಮಾಡಿಕೊಳ್ಳಬೇಕಾಗುತ್ತದೆ. ರೋಗ ನಿದಾನಕ್ಕೆ ಶರೀರ ವಿಜ್ಞಾನ ಬಹಳ ಸಹಕಾರಿ. ಆದರೆ "ಆರೋಗ್ಯ ಜ್ಯೋತಿಷ"—ಅಂದರೆ ಮನುಷ್ಯನ ಆರೋಗ್ಯ ಹಾಗೂ ಗ್ರಹಗಳು ಅವನ ಮೇಲೆ ಈ ದಿಶೆಯಲ್ಲಿ ಮಾಡುವ ಪರಿಣಾಮ ಇದನ್ನೇ ಅಭ್ಯಾಸ ಮಾಡಬೇಕಾದರೆ ಶರೀರ ಜ್ಯೋತಿಷ್ಯವನ್ನು ಇದಕ್ಕೆ ಆಧಾರವೆಂದು ತೆಗೆದುಕೊಳ್ಳಬೇಕಾಗುತ್ತದೆ. ಕಾಲಪುರುಷನ ಪ್ರಕಾರ ಶರೀರದ ಭಿನ್ನಭಿನ್ನ ಅಂಗಾಂಗಗಳ ಮೇಲೆ ಭಿನ್ನಭಿನ್ನ ಸ್ಥಾನಗಳು, ಗ್ರಹಗಳು, ರಾಶಿಗಳ ಪರಿಣಾಮವಿರುತ್ತದೆ. ಆದ್ದರಿಂದ ಯಾವಯಾವ ಅಂಗಗಳ ಮೇಲೆ ಯಾವಯಾವ ಸ್ಥಾನಗಳು, ಯಾವಯಾವ ಗ್ರಹಗಳು, ಯಾವಯಾವ ರಾಶಿಗಳು ಆಧಿಪತ್ಯವನ್ನು ಹೊಂದಿವೆ ಎಂಬುದರ ಸ್ಥೂಲ ವಿವೇಚನೆಯನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ.

### ದ್ವಾದಶ ಸ್ಥಾನಗಳಿಂದ ಅಂಗ ವಿಭಾಗ

ಜಾತಕದ ದ್ವಾದಶ ಸ್ಥಾನಗಳು (ಭಾವಗಳು) ಶರೀರದ ಬೇರೆ ಬೇರೆ ಅಂಗಾಂಗಗಳ ಮೇಲೆ ಆಧಿಪತ್ಯವನ್ನು ಹೊಂದಿವೆ. ಇವುಗಳ ವಿವೇಚನೆ ಈ ಕೆಳಗಿನಂತಿದೆ:—

**ಪ್ರಥಮ ಸ್ಥಾನ:**— ಶಿರಸ್ಸು, ಮಸ್ತಿಷ್ಕ, ಲಲಾಟ, ಓಷ್ಠ, ನಾಸ, ಕಪೋಲ.

**ದ್ವಿತೀಯ ಸ್ಥಾನ**— ನೇತ್ರ, ಗ್ರೀವ (ಕುತ್ತಿಗೆ), ಗಂಟಲು, ಭ್ರೂ, ದಂತ, ಚಿಬುಕಾ, ಅನ್ನನಲಿಕೆ, ಶ್ವಾಸನಲಿಕೆ, ತಾಲು, ನಾಲಿಗೆ, ಕಂಠ, ಉಪಜಿಹ್ವಿಕಾ, ಗಲಶುಂಡಿಕಾ.

**ತೃತೀಯ ಸ್ಥಾನ:**— ಬಾಹು, ಕರ್ಣ, ಪಾರ್ಶ್ವ (ಪಕ್ಕೆ), ಪುಪ್ಪುಸದ ಮೇಲ್ಭಾಗ, ಉಚಿ.

**ಚತುರ್ಥ ಸ್ಥಾನ:** ಕಕ್ಷ, ವಕ್ಷಪ್ರದೇಶ, ಕ್ಲೋಮಗಳು, ಸ್ತನ, ಹೃದಯ, ಪುಪ್ಪುಸಗಳು.

**ಪಂಚಮ ಸ್ಥಾನ:**— ಆಮಾಶಯ. ಗರ್ಭಾಶಯ, ಯಕೃತ್, ಪ್ಲೀಹ, ಬೆನ್ನು, ಬೆನ್ನೆಲವು, ಉದರ, ಜಠರ, ರಕ್ತಾಶಯ.

**ಷಷ್ಠ ಸ್ಥಾನ:**— ಸಣ್ಣ ಕರಳು (ಆಂತ್ರ), ಉಂಡುಕ, ನಾಭಿ, ಟೊಂಕ, ನಡ, ಜಠರಾಗ್ನಿ.

**ಸಪ್ತಮ ಸ್ಥಾನ** — ಕಟಿ, ಬಸ್ತಿ, ಮೂತ್ರಾಶಯ.

**ಅಷ್ಟಮ ಸ್ಥಾನ:**— ಪಕ್ವಾಶಯ, ದೊಡ್ಡ ಕರುಳು, ಗುದ, ಮೇಢ್ರ, (ಲಿಂಗ) ಯೋನಿ, ಕುಕುಂದರ, ವೃಷಣ.

**ನವಮ ಸ್ಥಾನ:**— ವಂಕ್ಷಣಪ್ರದೇಶ, ಊರು (ತೊಡೆ), ಊರ ಪಿಂಡಿಕೆ.

**ದಶಮ ಸ್ಥಾನ:**— ಜಾನು, ಜಂಘಾಪಿಂಡಿಕೆ, ಮೊಳಕಾಲು.

**ಏಕಾದಶ ಸ್ಥಾನ:**— ಹಿಮ್ಮಡ, ಮೀನಗಂಡ.

**ದ್ವಾದಶ ಸ್ಥಾನ:**— ಗುಲ್ಫ, ಪಾದ, ನೇತ್ರ.

## ಅಂಗಾಂಗಗಳ ಮೇಲೆ ಗ್ರಹಗಳ ಪ್ರಭುತ್ವ

ಶರೀರದ ಬೇರೆ ಬೇರೆ ಅಂಗಾಂಗಗಳ ಮೇಲೆ ಬೇರೆ ಬೇರೆ ಗ್ರಹಗಳು ಆಧಿಪತ್ಯವನ್ನು ಹೊಂದಿವೆ. ಅವುಗಳ ವಿವೇಚನೆ ಈ ಕೆಳಗಿನಂತೆ ಕೊಡ ಲಾಗಿದೆ:—

**ರವಿ:**— ಶಿರಸ್ಸು, (ಮಸ್ತಿಷ್ಕ), ಕಣ್ಣು, ಹೃದಯ,ಬೆನ್ನೆಲವು, ಬೆನ್ನು, ಸಣ್ಣಕರುಳು.

**ಚಂದ್ರ:**—ಉದರ, ತುಟಿಗಳು, ಮೂಗು,ಗರ್ಭಾಶಯ, ಆಮಾಶಯ, ವಕ್ಷಸ್ಥಳ, ಅನ್ನಕೋಶ, ಅನ್ನನಲಿಕೆ, ದುಗ್ಧಪಿಂಡ, ಸ್ತನಗಳು.

**ಮಂಗಳ:**— ಸ್ನಾಯು, ರಕ್ತ.

**ಬುಧ:**— ಫುಪ್ಪುಸ, ಮಜ್ಜಾತಂತು, ತ್ವಚೆ, ನರಗಳು (Nerves), ಮೆದುಳು.

**ಗುರು:**— ಯಕೃತ್, ಪ್ಲೀಹ, ಗ್ರೀವಾ.

**ಶುಕ್ರ:**— ಜನನೇಂದ್ರಿಯ, ಲಿಂಗ / ಯೋನಿ.

**ಶನಿ:**— ಪಕ್ವಾಶಯ, ದೊಡ್ಡಕರುಳು, ಗುದ, ವೃಷಣ.

## ಅಂಗಾಂಗಗಳ ಮೇಲೆ ರಾಶಿಗಳ ಪ್ರಭಾವ

ಶರೀರದ ಬೇರೆ ಬೇರೆ ಅಂಗಾಂಗಗಳ ಮೇಲೆ ಬೇರೆ ಬೇರೆ ರಾಶಿಗಳು ಆಧಿಪತ್ಯವನ್ನು ಹೊಂದಿವೆ. ಈ ರಾಶಿಗಳನ್ನು ಅನೇಕ ವಿಧವಾಗಿ ವಿಂಗಡಿಸ ಬಹುದು. ಪ್ರಸ್ತುತ ಈ ಪ್ರಕರಣದಲ್ಲಿ ಮೂರು ರೀತಿಯಲ್ಲಿ ವಿಂಗಡಿಸ ಲಾಗಿದೆ. ೧) ಬಾಹ್ಯ ಅವಯವದ ರಾಶಿ ಪರಿಣಾಮ, ೨) ಅಂತರ್ಗತ ಅವಯವಗಳ ರಾಶಿ ಪರಿಣಾಮ, ೩) ರಚನಾತ್ಮಕ ಶರೀರ ಬಂಧನ.

### ೧. ಬಾಹ್ಯ ಅವಯವದ ರಾಶಿ ಪರಿಣಾಮ

೧ **ಮೇಷ:**— ಶಿರಸ್ಸು, ಮುಖ.
೨ **ವೃಷಭ:**— ಕುತ್ತಿಗೆ, ಗಂಟಲು.
೩ **ಮಿಥುನ:**— ಹೆಗಲು, ಬಾಹು.
೪ **ಕರ್ಕ:**— ಸ್ತನ, ಎದೆ.
೫ **ಸಿಂಹ:**— ಬೆನ್ನು, ಬೆನ್ನೆಲವು.
೬ **ಕನ್ಯಾ:**— ನಾಭಿ.
೭ **ತುಲಾ:**—ನಡದ (ಕಟೀರ) ಭಾಗ.
೮ **ವೃಶ್ಚಿಕ:**— ಲಿಂಗ, ಯೋನಿ, ಮೇಢ್ರ, ಗುದ, ವೃಷಣ.
೯ **ಧನು:**— ಊರು (ತೊಡೆ), ಹಾಗೂ ಪೃಷ್ಠಭಾಗ.
೧೦ **ಮಕರ:**— ಜಂಘಾ (ಮೊಣಕಾಲು), ಜಾನು
೧೧ **ಕುಂಭ:**— ಮೊಣಕಾಲು ಕೆಳಭಾಗ ಹಾಗೂ ಮೀನಖಂಡ
೧೨ **ಮೀನ:**— ಪಾದ, ಕಾಲ್ಬೆರಳು.

## ೨. ಅಂತರ್ಗತ ಅವಯವಗಳ ಮೇಲೆ ರಾಶಿಗಳ ಪರಿಣಾಮ

**ಮೇಷ:—** ಬಾಯಿ, ಮಿದುಳು.

**ವೃಷಭ:—** ಅನ್ನನಲಿಕಾ, ಶ್ವಾಸನಲಿಕಾ, ಜಿಹ್ವಾ, ತಾಲು, ಉಪ-ಜಿಹ್ವಿಕಾ, ಗೋಣು, ಕಂಠ, ಧ್ವನಿಪೆಟ್ಟಿಗೆ.

ಮಿಥುನ: ಘುಪ್ಫುಸ, ಶ್ವಾಸ (ಪ್ರಾಣವಾಯು), ಮಜ್ಜಾತಂತು, ಶ್ವಾಸನಲಿಕಾ, ಶ್ವಾಸಕೋಶ.

**ಕರ್ಕ:** ಆಮಾಶಯ, ಸ್ತನ, ಬಗಲು.
**ಸಿಂಹ:—** ಹೃದಯ. ಯಕೃತ್, ಪ್ಲೀಹ.
**ಕನ್ಯಾ:—** ಸಣ್ಣ ಕರುಳು, ದೊಡ್ಡ ಕರುಳು.
**ತುಲಾ:—** ಬಸ್ತಿ, ಮೂತ್ರಪಿಂಡ, ಮೂತ್ರಕೋಶ, ಮೂತ್ರನಾಳ,
**ವೃಶ್ಚಿಕ:—** ಮೂತ್ರಾಶಯ.
**ಧನು:—** ಶಿರೆ, ಧಮನಿ, ಸ್ನಾಯು.
**ಮಕರ:—** ಅಸ್ಥಿ (ಎಲವು), ಸಂಧಿಗಳು, ಮರ್ಮಸ್ಥಾನಗಳು.
**ಕುಂಭ:—** ರಕ್ತಾಭಿಸರಣ.
**ಮೀನ:—** ಶರೀರದಲ್ಲಿಯ ರಸನಾತ್ಮಕ ದ್ರವ್ಯಗಳು.

## ೩. ರಚನಾತ್ಮಕ ಶರೀರ ಬಂಧನ

ಈ ರಚನಾತ್ಮಕ ಶರೀರ ಬಂಧನದಲ್ಲಿ ಅಸ್ಥಿ, ಸ್ನಾಯು, ಶಿರ, ಧಮನಿಗಳೆಂಬ ಪ್ರಕಾರಗಳಿದ್ದು ಅವುಗಳ ವಿವೇಚನೆಯನ್ನು ರಾಶ್ಯಾನುಸಾರವಾಗಿ ಕೊಡಲಾಗಿದೆ.

**ಮೇಷ:—** ಮಸ್ತಿಷ್ಕದಲ್ಲಿರುವ ಹಾಗೂ ಶಿರ ಪೃಷ್ಠದಲ್ಲಿರುವ ಸ್ನಾಯುಗಳು ಮಸ್ತಿಷ್ಕದಲ್ಲಿರುವ ಶಿರೆಗಳು, ಮೂಗಿನ ಮೇಲಿನ ಭಾಗದಲ್ಲಿರುವ ಅಸ್ಥಿಗಳು ಕಿವಿಯಲ್ಲಿರುವ ಹಾಗೂ ಗೋಣಿನ ಧಮನಿಗಳು.

**ವೃಷಭ:—** ಗೋಣಿನಲ್ಲಿರುವ ಅಸ್ತಿ ಹಾಗೂ ಸ್ತನಗ್ರಂಥದಲ್ಲಿರುವ ಸ್ನಾಯುಗಳು, ಸ್ಥನಗ್ರಂಥಿ, ಕಿವಿಯ ಹಿಂಬದಿಯಲ್ಲಿಯ ಸ್ನಾಯು ಹಾಗೂ

ಅನ್ನನಲಿಕೆಯಲ್ಲಿಯ ಸ್ನಾಯು, ಗೋಣಿನ ಒಳಮಗ್ಗಲಿನಲ್ಲಿರುವ ಧಮನಿ (ಜೆಸಲಿಸ್), ಶೀರ್ಷ, ಪೃಷ್ಠದಲ್ಲಿಯ ಹಾಗೂ ಕಂಠದಲ್ಲಿಯ ಶಿರೆಗಳು (ಥೈರೈಯಿಡ್).

**ಮಿಥುನ:** ಕುತ್ತಿಗೆಯಲ್ಲಿರುವ, ಹೆಗಲಿನಲ್ಲಿರುವ, ಕೈಯಲ್ಲಿರುವ, ಪಾರ್ಶ್ವದಲ್ಲಿರುವ ಅಸ್ಥಿಗಳು,(ಮಣಿಬಂಧಾಸ್ಥಿ ಭುಜಾಸ್ಥಿ) ಹಾಗೂ ಹೆಗಲಿನಲ್ಲಿರುವ, ಕೈಯ್ಯಲ್ಲಿರುವ, ಎದೆಯಲ್ಲಿರುವ ಸ್ನಾಯುಗಳು (ಉತ್ತನಾಕ ಸ್ನಾಯು ಹಾಗೂ ತ್ರಿಕೋನಾಕೃತಿಯ ಸ್ನಾಯುಗಳು) ಮತ್ತು ಘುಪ್ಪುಸದಲ್ಲಿಯ (Basilik) ಶಿರೆಗಳು ಮತ್ತು ಫುಪ್ಪುಸಾವರಣದಲ್ಲಿಯ ಶಿರೆಗಳು, ಪ್ರಕೋಷ್ಠಗತ ಧಮನಿಗಳು, ಶ್ವಸನ ನಲಿಕೆಯಲ್ಲಿಯ ಧಮನಿಗಳು, ಪಂಜರ ಮಧ್ಯಸ್ಥ, ಅಂಗುಷ್ಠ, ಮೂಲಾಶ್ರಿತ, ಅಂತಃ ಪ್ರಕುಷ್ಠಿತ ಧಮನಿಗಳು.

**ಕರ್ಕ:**— ವಕ್ಷಸ್ಥಳದಲ್ಲಿಯ ಅಸ್ಥಿಗಳು (ಉರೋಸ್ಥಿ), ಎದೆ ಹಾಗೂ ಹೊಟ್ಟೆಯಲ್ಲಿರುವ ಸ್ನಾಯುಗಳು. ಬೆನ್ನು ಮಧ್ಯದಲ್ಲಿರುವ, ಕಂಕುಳದಲ್ಲಿಯ ಶಿರೆಗಳು, ಜಠರದಲ್ಲಿಯ ಧಮನಿಗಳು.

**ಸಿಂಹ:** — ಪೃಷ್ಠ ಭಾಗದಲ್ಲಿಯ ಹಾಗೂ ಬೆನ್ನಿನಲ್ಲಿರುವ (ಬೆನ್ನೆಲವು) ಅಸ್ಥಿಗಳು, ಕೈಯಲ್ಲಿಯ ಹಾಗೂ ಪೃಷ್ಠ ಪ್ರದೇಶದ ಮತ್ತು ಬೆನ್ನಿನ ಭಾಗದಲ್ಲಿರುವ ಸ್ನಾಯುಗಳು, ಅಧೋಭಾಗದಲ್ಲಿರುವ ಶಿರೆಗಳು (ದೊಡ್ಡ ಶಿರೆಗಳು) ಹಣೆಯಲ್ಲಿಯ ಒಳಮಗ್ಗಲಿನ ಮಹಾಧಮನಿಗಳು.

**ಕನ್ಯಾ:**— ಪಕ್ವಾಶಯ ಹಾಗೂ ಆಂತ್ರಿಕದಲ್ಲಿರುವ ಅಸ್ಥಿಗಳು, ಕರುಳಿನಲ್ಲಿರುವ ತಿರ್ಯಕ್ ಸ್ನಾಯುಗಳು. ಯಕೃತ್‌ದಲ್ಲಿಯ ಮತ್ತು ನಾಭಿಭಾಗದಲ್ಲಿರುವ ಮತ್ತು ಪಕ್ವಾಶಯಗತವಾಗಿರುವ ಶಿರೆಗಳು, ಜಠರಾಂತರಗತ ಧಮನಿಗಳು ಮತ್ತು ಸ್ತ್ರೀಯರ ಮಾಸಿಕ ಧರ್ಮದ ಧಮನಿಗಳು.

**ತುಲಾ:**— ಟೊಂಕದಲ್ಲಿರುವ ಅಸ್ಥಿಗಳು (ಕಟಿರಾಸ್ಥಿ), ಮೂತ್ರಾವಷ್ಕಂಭ (Quadiati) ,ಟೊಂಕದಲ್ಲಿರುವ ನಿತಂಬದಲ್ಲಿರುವ ಸ್ನಾಯುಗಳು, ಮೂತ್ರಪಿಂಡದಲ್ಲಿಯ ಹಾಗೂ ವೃಕ್ ಶಿರೆಗಳು. ಮೂತ್ರಪಿಂಡದ ಮೇಲಿರುವ (Lumber) ಧಮನಿಗಳು.



ಪ್ರಥಮ ಸ್ಥಾನ
ಮೇಷ
ದ್ವಿತೀಯ ಸ್ಥಾನ
ವೃಷಭ
ತೃತೀಯ ಸ್ಥಾನ
ಮಿಥುನ
ಚತುರ್ಥ ಸ್ಥಾನ
ಕರ್ಕ
ಪಂಚಮ ಸ್ಥಾನ
ಸಿಂಹ
ಷಷ್ಠ ಸ್ಥಾನ
ಕನ್ಯಾ
ಸಪ್ತಮ ಸ್ಥಾನ
ತುಲಾ
ಅಷ್ಟಮ ಸ್ಥಾನ
ವೃಶ್ಚಿಕ
ನವಮ ಸ್ಥಾನ
ಧನು
ದಶಮ ಸ್ಥಾನ
ಮಕರ
ಏಕಾದಶ ಸ್ಥಾನ
ಕುಂಭ
ದ್ವಾದಶ ಸ್ಥಾನ
ಮೀನ

**ವೃಶ್ಚಿಕ:** — ಆಸನಾಸ್ಥಿ, ಜಂಘಾಸ್ಥಿ, ನಾಸಿಕಾಸ್ಥಿಗಳು, ಗುದದ್ವಾರ ದಲ್ಲಿರುವ ಹಾಗೂ ಯೋನಿ ಅಂತರ್ಗತದಲ್ಲಿರುವ ಮತ್ತು ಮೂತ್ರಾಶ್ರಯ ದಲ್ಲಿರುವ ಸ್ನಾಯುಗಳು, ವೀರ್ಯೋತ್ಪಾದಕ ಹಾಗೂ ತ್ವಚೆಯ ಮೇಲಿರುವ ಮತ್ತು ಮೂಲವ್ಯಾಧಿ ಸಂಬಂಧಿಸಿದ ಶಿರೆಗಳು, ಸಣ್ಣಕರುಳಿನ ಹಾಗೂ ಪಕ್ವಾಶಯದ ಕೆಳಮಗ್ಗಲಿರುವ ಧಮನಿಗಳು.

**ಧನು:**— ಜಂಘಾಸ್ಥಿ, ಕಟಿಕಪಾಳ, ಉರೋಸ್ಥಿ, ಗುದಾಸ್ಥಿ. ತ್ರಿಕಾಸ್ಥಿ ಮೊದಲಾದವುಗಳು ಟೊಂಕದಲ್ಲಿರುವ, ನಿತಂಬದಲ್ಲಿರುವ, ಉರದಲ್ಲಿರುವ ಸ್ನಾಯುಗಳು, ಸಣ್ಣ ಕರುಳಿನಲ್ಲಿರುವ ಹಾಗೂ ಬೃಹತ್ ಶಿರೆಗಳು, ಸಣ್ಣ ಕರುಳಿನ ಕೆಳಭಾಗದಲ್ಲಿರುವ ತ್ರಿಕಾಸ್ಥಿಗತ ಧಮನಿಗಳು.

**ಮಕರ:** - ಮೊಳಕಾಲಿನಲ್ಲಿರುವ, ಚಿಪ್ಪಿಯಲ್ಲಿರುವ ಅಸ್ಥಿಗಳು, ಮೊಳಕಾಲಿನಲ್ಲಿಯ ಮಂಡಿಯ ಭಾಗದಲ್ಲಿಯ (ಚಿಪ್ಪಿನಲ್ಲಿರುವ) ಸ್ನಾಯುಗಳು, ಮೊಳಕಾಲಿನಲ್ಲಿಯ ಹಾಗೂ ಹೊಟ್ಟೆಯ ಒಳಮಗ್ಗಲಿನಲ್ಲಿರುವ ಶಿರೆಗಳು ಸಣ್ಣಕರುಳಿನ ಹೊರಮಗ್ಗಲಿನ ಹಾಗೂ ಮೊಳಕಾಲಿನಲ್ಲಿರುವ ಧಮನಿಗಳು.

**ಕುಂಭ** — ಕಾಲಿನಲ್ಲಿಯ ಹಾಗೂ ಬಹಿರ್ ಜಂಘಾಸ್ಥಿ, ಅಂತರ್ ಜಂಘಿನಲ್ಲಿಯ ಹಾಗೂ ಹೊಟ್ಟೆಯಲ್ಲಿಯ, ಜಠರದಲ್ಲಿಯ, ಹೊಕ್ಕಳದಲ್ಲಿಯ ಸ್ನಾಯುಗಳು, ಒಳಗಿನ (Saphenous) ಭಾಗದಲ್ಲಿಯ ಶಿರೆಗಳು, ಕಾಲಿ ನಲ್ಲಿರುವ ಧಮನಿಗಳು.

**ಮೀನ:**— ಕಾಪ್ಬೆರಳಿನಲ್ಲಿರುವ ಅಸ್ಥಿಗಳು, ಕಾಲ್ಬೆರಳಿನ ಮೇಲೆ ಇರುವ ಸ್ನಾಯುಗಳು, ಅಂಗಾಲಿನ ಅಂತರ್ಭಾಗದಲ್ಲಿರುವ ಶಿರೆಗಳು, ಕಾಲಿನ ಹಾಗೂ ಅಂಗಾಲಿನಲ್ಲಿರುವ ಧಮನಿಗಳು.



# ೨

# ಗ್ರಹ-ರಾಶಿಗಳ ಸ್ಥಾನಾದಿ ವಿಚಾರ

---

ಶರೀರ ಜ್ಯೋತಿಷ್ಯದ ವಿಭಾಗದಲ್ಲಿ ಶರೀರದ ಯಾವಯಾವ ಅಂಗಗಳ ಮೇಲೆ ಯಾವಯಾವ ಗ್ರಹ-ರಾಶಿ, ಸ್ಥಾನಗಳು ಆಧಿಪತ್ಯ ಹೊಂದಿವೆ ಎಂಬುವದನ್ನು ಪರಿಶೀಲಿಸಲಾಯಿತು. ಇದರಂತೆಯೇ ಈ ವಿಶ್ಲೇಷಣೆಯನ್ನು ವಿಸ್ತರಿಸಿ ಅದನ್ನು ಬೇರೊಂದು ದೃಷ್ಟಿಯಲ್ಲಿ ನೋಡಬೇಕಾದಾಗ ಯಾವಯಾವ ಗ್ರಹ, ಯಾವಯಾವ ಸ್ಥಾನ, ಯಾವ ಯಾವ ರಾಶಿಗಳು ಯಾವಯಾವ ರೋಗಕಾರಕವಾಗುತ್ತವೆ, ನಿರ್ಮಾಣಮಾಡುತ್ತವೆ ಎಂಬುದರ ಅರಿವಾಗುತ್ತದೆ. ಈ ಸೂಕ್ಷ್ಮ ವಿಚಾರವೇ ಈ ಭಾಗದಲ್ಲಡಕವಾಗಿದೆ.

ಯಾರೊಬ್ಬ ಜಾತಕನ ರೋಗದ ವಿಷಯವಾಗಿ ಅಥವಾ ರೋಗ ನಿದಾನ ಮಾಡುವಾಗ ಷಷ್ಠಸ್ಥಾನವನ್ನು ಪ್ರಾಮುಖ್ಯವಾಗಿಟ್ಟುಕೊಂಡು ರೋಗದ ವಿಷಯವಾಗಿ ನಿರ್ಣಯಿಸಬೇಕೆಂದು ಅನೇಕ ಜ್ಯೋತಿಷಿಗಳ ಅಭಿಪ್ರಾಯವಿರುತ್ತದೆ. ಆದರೆ ನಮ್ಮ ಅಭಿಪ್ರಾಯದಲ್ಲಿ ಎಲ್ಲ ರೋಗಿಗಳಿಗೂ ಷಷ್ಠಸ್ಥಾನವನ್ನೇ ಪರಿಶೀಲಿಸಬೇಕೆಂದು ಅನಿಸುವದಿಲ್ಲ. ಏಕೆಂದರೆ ಷಷ್ಠಸ್ಥಾನ ಹಾಗೂ ಷಷ್ಠೇಶ ದೂಷಿತವಿರದೆ ಸದಾಕಾಲ ರೋಗದಿಂದ ಬಳಲುತ್ತಿರುವ ಅನೇಕ ಜಾತಕಗಳನ್ನು ನೋಡಿದ ಅನುಭವವಿದೆ. ಅದು ಏಕೆ?

ಷಷ್ಠಸ್ಥಾನವೇನೋ ರೋಗದ ಸ್ಥಾನ ನಿಜ. ಆದರೆ ಎಲ್ಲ ರೋಗಿಗಳ ಸ್ಥಾನ ಷಷ್ಠಸ್ಥಾನವಿರುವದಿಲ್ಲ. ಉದಾಹರಣೆಗಾಗಿ, ದೀರ್ಘಾವಧಿ ರೋಗಗಳ (Chronic discases ವಿಷಯವಾಗಿ ಚತುರ್ಥ, ದ್ವಾದಶ ಸ್ಥಾನಗಳನ್ನು ತೀವ್ರ ಬಾಧೆಯ (Acute diseases) ರೋಗಗಳಿಗಾಗಿ ಷಷ್ಠಸ್ಥಾನವನ್ನು ಹಾಗೂ ಅನಿರೀಕ್ಷಿತ, ಅಕಲ್ಪಿಕ, ಆಕಸ್ಮಿಕ ಮತ್ತು ಅಪಘಾತಿಕ ಮೊದಲಾದ ತೀವ್ರ ಮರಣಸೂಚಕ ರೋಗಗಳಿಗಾಗಿ ಅಷ್ಟಮಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಇದಲ್ಲದೆ ಯಾರೊಬ್ಬ ವ್ಯಕ್ತಿಯ ಸಾಮಾನ್ಯ ಆರೋಗ್ಯ

ಸ್ಥಿತಿಗತಿಗಾಗಿ (General health condition) ತನುಸ್ಥಾನವನ್ನು ಪರಿ-ಶೀಲಿಸಬೇಕಾಗುತ್ತದೆ. ಆದುದರಿಂದ ಯಾವಯಾವ ಸ್ಥಾನಗಳಿಂದ ಯಾವ ಯಾವ ರೋಗಗಳನ್ನು ಪರಿಶೀಲಿಸಬೇಕು ಎಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ.

**ತನುಸ್ಥಾನ :—** ಜಾತಕದ ತನುಸ್ಥಾನದಿಂದ ರೋಗದ ವೈಶಿಷ್ಟ್ಯ ಕ್ಕಿಂತ ರೋಗಿಯ ವಿಷಯವಾಗಿಯೇ ಹೆಚ್ಚು ವಿವರಿಸಲು ಬರುತ್ತದೆ. ಲಗ್ನ ದಲ್ಲಿರುವ ರಾಶಿಯ ಮೇಲಿನ ಗ್ರಹಗಳ ಮೇಲಿಂದಲೂ, ಲಗ್ನೇಶನ ಮೇಲಿಂದಲೂ, ಭಿನ್ನ ಭಿನ್ನ ವಿಷಯಗಳು ತಿಳಿಯುತ್ತವೆ. ಜಾತಕನ ನೈಸರ್ಗಿಕ ಜೀವನಶಕ್ತಿ (Vital Power) ಹೇಗಿದೆ? ರೋಗಿಯ ಪ್ರತೀಕಾರಶಕ್ತಿ ಹೇಗಿದೆ? ವಾತ-ಪಿತ್ತ-ಕಫಾದಿ ಪ್ರಕೃತಿಯ ಗುಣಧರ್ಮ ಯಾವದು? ರಾಜಸ, ಸಾತ್ತ್ವಿಕ, ತಾಮಸ ಮೊದಲಾದ ಮನೋಧರ್ಮ ಹೇಗಿದೆ? ಕಾಮ, ಕ್ರೋಧಾದಿ ಸ್ವಭಾವಗಳನ್ನು ಜಾತಕದ ತನುಸ್ಥಾನದಿಂದಲೇ ಹೇಳಲು ಬರುತ್ತದೆ. ಇನ್ನು ರೋಗದ ವಿಷಯವಾಗಿ ಹೇಳಬೇಕಾದರೆ ಈ ಕೆಳಗಿನ ರೋಗಗಳನ್ನು ತನುಸ್ಥಾನದಿಂದ ಹೇಳಲು ಬರುತ್ತದೆ.

ಶಿರೋರೋಗ, ಮಸ್ತಿಷ್ಕಾವರಣ ದಾಹ, ಅಲರ್ಜಿ, ಮೈಲಿ, ಗೊಬ್ಬರ, ಗಣಜಲಿ, ತ್ವಚೆರೋಗಗಳು, ಉನ್ಮಾದ, ಅಪಸ್ಮಾರ, ತಲೆಗೆ ಚಕ್ರಬರುವದು, ಬವಳಿ, ಕವಳಿ, ಅರ್ಧಾಂಗವಾಯು, ಅಪಘಾತಾದಿಗಳು, ದುರ್ಮರಣ, ಮುಖರೋಗ, ರಕ್ತಪಿತ್ತಡ, ಇನ್‌ಫ್ಲುಯೆಂಜಾ, ಮಲರೋಗ ಮೊದಲಾದವು.

**ದ್ವಿತೀಯ ಸ್ಥಾನ :—** ಮುಖರೋಗ, ನೇತ್ರರೋಗ, ಟಾನ್ಸಿಲ್, ಕಿರುನಾಲಿಗೆ ಬೀಳುವಿಕೆ, ದಂತರೋಗ, ಕಂಠರೋಗ, ಘಟಸರ್ಪ, ಕಾಸ, ಶ್ವಾಸ, ಛರ್ದಿ, ಹಿಕ್ಕಾ (ಬಿಕ್ಕು) ಗಳ ರೋಗ ಮೊದಲಾದ ರೋಗಗಳು.

**ತೃತೀಯ ಸ್ಥಾನ :-** ಕರ್ಣರೋಗ, ಬಾಹುರೋಗ, ನಿಮೋನಿಯಾ, ಆಯೋಗ್ಯ ಔಷಧಗಳ ಪ್ರತಿಕ್ರಿಯೆ ಮೊದಲಾದವುಗಳು.

**ಚತುರ್ಥ ಸ್ಥಾನ :—** ನೀರಿನಿಂದ ದುರ್ಮರಣ, ವಾಹನಾದಿಗಳಿಂದ ಅಪಘಾತಗಳು, ಹೃದಯವಿಕಾರ, ನಿಮೋನಿಯಾ, ಪ್ಲುರಿಸಿ, ಕೋಮಾ,

ಸ್ತನವಿಕಾರ, ಎದೆನೋವು, ಫುಪ್ಪುಸವಿಕಾರ, ಆತ್ಮಹತ್ಯೆ ಮಾಡಿಕೊಳ್ಳುವಿಕೆ, ಆಯುಷ್ಯದ ಕೊನೆಯ ಸ್ಥಿತಿಯಲ್ಲಿ ಬರುವ ರೋಗ ಮೊದಲಾದವು.

**ಪಂಚಮ ಸ್ಥಾನ :**— ಮಂತ್ರ, ತಂತ್ರ, ಮಾಟ-ಮದ್ದುಗಳಿಂದಾಗುವ ವಿಕಾರಗಳು. ಗರ್ಭದ ಹಾಗೂ ಗರ್ಭಾಶಯದ ವಿಕಾರಗಳು, ಉದರ ವಿಕಾರ, ಜಲೋದರ, ಯಕೃತ್‌ವಿಕಾರ, ಪ್ಲೀಹವಿಕಾರ, ಹೊಟ್ಟೆಶೂಲೆ, ಅಪೆಂಡಿಸೈಟಿಸ್, ಕಾಮಣಿ, ಪಾಂಡುತ, ಗರ್ಭಪಾತ, ಮಧುಮೇಹ, ರಾಜಯಕ್ಷ್ಮ, ಆಮ್ಲಪಿತ್ತ, ಆಮಾಶಯಗತವ್ರಣ, ಆಂತ್ರಿಕವ್ರಣ ಮೊದಲಾದವು.

**ಷಷ್ಠ ಸ್ಥಾನ :**— ತೀವ್ರ ಬಾಧೆಯ (Acute diseases) ಎಲ್ಲ ರೋಗಗಳು, ಅಗ್ನಿಮಾಂದ್ಯ, ಅಪಚನ, ಅತಿಸಾರ, ಸಂಗ್ರಹಣೆ, ಗೃಧ್ರಸಿವಾತ, ರಾಜಯಕ್ಷ್ಮ, ಪಾಂಡುತ, ಟಾಯಫಾಯಿಡ್ ಮೊದಲಾದವುಗಳು,

**ಸಪ್ತಮ ಸ್ಥಾನ :**— ಪ್ರಮೇಹ, ಮಧುಮೇಹ, ಕಾಲರಾ, ಮೂತ್ರಕೃಛ್, ಮೂತ್ರಾಶ್ಮರಿ, ಉಪದಂಶ, ಗನೋರಿಯಾ, ಮೂತ್ರರೋಗಗಳು, ಸ್ತ್ರೀರೋಗಗಳು ಮುಂತಾದವುಗಳು.

**ಅಷ್ಟಮ ಸ್ಥಾನ :**— ಎಲ್ಲ ದುರ್ಮರಣಗಳು (Accidental deaths) ತೀವ್ರ ಮರಣಸೂಚಕ ರೋಗಗಳು: ಗುದವಿಕಾರ, ಗರ್ಮಿ, ಪರ್ಮಾ, ಉಪದಂಶ, ಪ್ಲೇಗು, ಕಾಲರಾ, ಭಗಂದರ, ಪಿಶಾರ, ಮುಟ್ಟುದೋಷ, ಮೂಲವ್ಯಾಧಿ, ವೃಷಣ-ವೃದ್ಧಿ, ಎಲ್ಲ ಸ್ತ್ರೀರೋಗಗಳು ಮೊದಲಾದವು.

**ನವಮ ಸ್ಥಾನ :**— ಸಂಧಿವಾತ, ಆಮವಾತ, ವಾತರಕ್ತ ಮುಂತಾದವುಗಳು.

**ದಶಮ ಸ್ಥಾನ :**— ಸಂಧಿವಾತ, ವಾತರಕ್ತ ಮೊದಲಾದವುಗಳು.

**ಏಕಾದಶ ಸ್ಥಾನ :**— ಹಿಂಬಡ ಹಾಗೂ ಮೀನಗಂಡ ಮೊದಲಾದವುಗಳ ವಿಕಾರಗಳು.

**ದ್ವಾದಶ ಸ್ಥಾನ :—** ಹಳೆಯ ತರಹದ ರೋಗಗಳು, ಪಕ್ಷಾಘಾತ ಮೊದಲಾದವು.

## ರಾಶಿಗಳಿಂದ ರೋಗಗಳ ವಿಚಾರ

**ಮೇಷ :—** ಶಿರೋರೋಗ, ಮುಖರೋಗ, ಮಸ್ತಕ ಶೂಲ, ಸೂರ್ಯಾರ್ತ, ಭ್ರಮ, ಮದ, ಮೋಹ, ಉನ್ಮಾದ, ಇನ್‌ಫ್ಲುಯೆಂಜಾ, ನಿದ್ರಾನಾಶ, ಪಿತ್ತದೋಷ ಪ್ರಧಾನ ರೋಗಗಳು, ಅರ್ಧಾಂಗವಾಯು, ಪೋಲಿಯೋ.

**ವೃಷಭ :—** ಟಾನ್ಸಿಲ್ಸ್, ಕಿರುನಾಲಿಗೆ ಜೋಳುವಿಕೆ, ಹುಗುಳು, ಕಂಠಗತರೋಗ, ಧ್ವನಿ ಕೆಡುವಿಕೆ, ತಾಲುಗತ ರೋಗ, ಕಾಸ, ಶ್ವಾಸ, ಕುತ್ತಿಗೆಯ ಮೇಲಿನ ಗಂಟುಗಳ ರೋಗ, ಅಪಸ್ಮಾರ, ಗಂಡಮಾಲೆ, ತಂದ್ರಾ, ಘಟಸರ್ಪ, ಮಸ್ತಿಷ್ಕಾವರಣದಾಹ.

**ಮಿಥುನ :—** ಪ್ರಾಣವಾಯುವಿನ ಕೊರತೆ ಪುಪ್ಪುಸವಿಕಾರ, ಅಸ್ಥಮಾ, ಹಸಿಕೆಮ್ಮು, ಮಜ್ಜಾತಂತು ವಿಕಾರ, ನಿಮೋನಿಯಾ, ಪುಪ್ಪುಸಾವರಣ, ಪ್ಲುರಿಸಿ. ಶ್ವಸನ ನಲಿಕೆಯಲ್ಲಿರುವ ದೋಷ, ವಿಲಂಬೀ ಕೆಮ್ಮು, ಕೈಗಳಿಗೆ ಫ್ರ್ಯಾಕ್ಚರ್, ಬ್ಲಡ್‌ಪ್ರೆಶರ್.

**ಕರ್ಕ :—** ಹೊಟ್ಟೆಗೆ ಸಂಬಂಧಿಸಿದ ರೋಗಗಳು, ಎದೆಗೆ ಸಂಬಂಧಿಸಿದ ರೋಗಗಳು, ಗರ್ಭಾಶಯ ರೋಗ, ಛರ್ದೀ (ವಾಳಮಳ ಆಗುವಿಕೆ), ಹೆಗಲು ನೋವು, ಅನ್ನರಸದ ರೋಗಗಳು, ಉದರವಿಕಾರ (ಜಲೋದರ), ಕ್ಯಾನ್ಸರ್, ಕಮರದೇಗು, ಶಸ್ತ್ರಕ್ರಿಯೆ ಆದಮೇಲೆ ಬರುವ ಪಾಂಡುತನ, ನೀರಿನಿಂದ ಬರುವ ರೋಗಗಳು, ಸಾಂಸರ್ಗಿಕ ರೋಗಗಳು, ಕಫ ದೋಷ ಪ್ರಧಾನ ರೋಗಗಳು, ಮಧುಮೇಹ, ಪ್ರಮೇಹ, ಮೂತ್ರರೋಗ, ತಂದ್ರಾ.

**ಸಿಂಹ :—** ಹೃದಯ ವಿಕಾರ, ಶ್ವಾಸೋಚ್ಛ್ವಾಸ ತೀವ್ರವಾಗುವಿಕೆ (Palpitation), ಮೂರ್ಛೆ, ಬವಳಿ, ಕೋಮಾ, ತೀವ್ರಜ್ವರ, ಬೆನ್ನೆಲುವಿನ ಹಾಗೂ ಬೆನ್ನಿನ ಸಂಬಂಧದ ರೋಗಗಳು, ರಕ್ತವಿಕಾರ (ರಕ್ತದೂಷಿತ ರೋಗ

ಗಳು), ತ್ವಚೆರೋಗಗಳು, ಬ್ಲಡ್‌ಪ್ರೆಶರ್, ಅರ್ಧಾಂಗವಾಯು, ಪಕ್ಷಾಘಾತ, ಪಿತ್ತಪ್ರಧಾನ ರೋಗಗಳು, ಯಕೃತ್‌ರೋಗ.

**ಕನ್ಯಾ** :— ಹೊಟ್ಟೆನೋವು, ಅಜೀರ್ಣ, ಅಪಚನ, ಅಗ್ನಿಮಾಂದ್ಯ, ಆಮ್ಲಶಂಕೆ, ಅತಿಸಾರ (Diarrhoea), ಸಣ್ಣಕರುಳಿನ ವಿಕಾರ, ಕಾಲರಾ, ಬದ್ಧಕೋಷ್ಠ, ತ್ವಚರೋಗ.

**ತುಲಾ** :— ನಾರು, ಮಧುಮೇಹ, ಪ್ರಮೇಹ, ಮೂತ್ರರೋಗ, ಬಸ್ತಿವಿಕಾರ, ಕಾಲರಾ, ಮೂತ್ರಾವರೋಧ, ಮೂತ್ರಾಶ್ಮರಿ, ಹವಾದೂಷಿತ ರೋಗ. ವಾತಪ್ರಧಾನ ರೋಗ.

**ವೃಶ್ಚಿಕ** : ಉಪದಂಶ, ಪರಮಾ, ಗನೋರಿಯಾ, ಪ್ರಮೇಹ, ಮಧುಮೇಹ, ಮುಟ್ಟುದೋಷದ ಎಲ್ಲ ವಿಕಾರಗಳು, ಸ್ತ್ರೀರೋಗಗಳು, ಹರ್ನಿಯಾ, ವೃಷಣವೃದ್ಧಿ, ಮೂತ್ರವಿಕಾರ, ಮೂಲವ್ಯಾಧಿ, ಭಗಂದರ, ಬಿಶಾರ, ರಕ್ತಪಿತ್ತ, ಡಿಸೆಂಟ್ರಿ, ವೀರ್ಯದೋಷ, ಯೋನಿವಿಕಾರ, ಲಿಂಗವಿಕಾರ, ಸಾಂಸರ್ಗಿಕ ರೋಗಗಳು, ಕಫ ಪ್ರಧಾನ ರೋಗಗಳು, ಕಾಲರಾ.

**ಧನು** : – ಎಲ್ಲ ಧಮನಿ, ಶಿರೆ, ಸ್ನಾಯುಗಳ ವಿಕಾರ, ಸಂಧಿವಾತ, ಆಮವಾತ, ವಾತರಕ್ತ, ಧನುರ್ವಾತ, ಪಕ್ಷಾಘಾತ, ಜಂಘಾಪೃಷ್ಠಶೂಲ, ರಕ್ತವಿಕಾರ, ಎಲ್ಲ ತರಹದ ಅಪಘಾತಗಳು, ಪಿತ್ತಪ್ರಧಾನ ರೋಗ, ದುರ್ಮರಣ, ಬ್ಲಡ್‌ಪ್ರೆಶರ್, ರಕ್ತಪಿತ್ತ.

**ಮಕರ** : — ಎಲ್ಲ ತ್ವಚರೋಗಗಳು, ಶಿರಾಗತವಾಯು, ಆಮವಾತ, ಕ್ಷುದ್ರಕೋಷ್ಠ, ಮಹಾರೋಗ, ಎಲ್ಲ ಕುಷ್ಠರೋಗಗಳು, ಚಿಳ್ಳು, ಬದ್ಧಕೋಷ್ಠ, ಹಿಸ್ಟೀರಿಯಾ. ಮಧುಮೇಹ.

**ಕುಂಭ** :— ರಕ್ತಕ್ಕೆ ಸಂಬಧಿಸಿದ ಎಲ್ಲ ರೋಗಗಳು, ಹೃದಯವಿಕಾರ, ಕೈ-ಮೊಳಕಾಲು ಹಾಗೂ ತೊಡೆನೋವು, ವಿಷಬಾಧೆ, ಮೂರ್ಛೆ, ಬ್ಲಡ್-ಪ್ರೆಶರ್, ಮಧುಮೇಹ, ಪ್ರಮೇಹ, ಯಕೃತ್‌ದೋಷ, ಪ್ಲೀಹಾವೃದ್ಧಿ, ಪಾಂಡುತ, ಕಾಮಿಣಿ, ಹವಾದೂಷಿತ ರೋಗಗಳು.

ಮೀನ: — ಚಳಿಜ್ವರ, ನೆಗಡಿ, ಕೆಮ್ಮು, ದಮ್ಮು, ನಿಮೋನಿಯಾ, ಮೂತ್ರವಿಕಾರ, ಮದ್ಯವಿಕಾರ, ನೀರಿನಿಂದ ಬರುವ ಎಲ್ಲ ರೋಗಗಳು, ಸಾಂಸರ್ಗಿಕ ರೋಗಗಳು, ಕಫಪ್ರಧಾನ ರೋಗಗಳು, ತಂದ್ರಾ.

## ಗ್ರಹಗಳಿಂದ ರೋಗಗಳ ವಿಚಾರ

ರವಿ :— ಎಲ್ಲ ಪ್ರಕಾರದ ಜ್ವರಗಳು, ಪಿತ್ತಪ್ರಧಾನವಾದ ಎಲ್ಲ ರೋಗ ಗಳು, ಮಸ್ತಿಷ್ಕದ ಮೇಲೆ ಬರುವ ಎಲ್ಲ ರೋಗಗಳು, ಬೆನ್ನುಹುರಿ ಹಾಗೂ ಬೆನ್ನಿನಲ್ಲಿರುವ ರೋಗಗಳು, ಮಧ್ಯಮ ವಯಸ್ಸಿಗೆ ಬರುವ ರೋಗಗಳು, ಹೃದಯವಿಕಾರ, ಬೆನ್ನುರಿ, ಬೆನ್ನುನೋವು, ಆಮಾಶಯಗತವ್ರಣ, ಆಂತ್ರಿಕ ವ್ರಣ, ಆಂತ್ರಿಕ ಪೃಚ್ಛಶೋಥ, ನೇತ್ರವಿಕಾರ, ಕುಬ್ಜ, ಕಣ್ಣಿನ ಬಿಂದು, ಮೋತಿಬಿಂದು, ಬ್ಲಡ್‌ಪ್ರೆಶರ್, ರಕ್ತಪಿತ್ತ, ರಕ್ತವಿಕಾರ, ದಾಹ, ಮೂರ್ಛಾ, ಬಾವು, ಶೋಥ.

ಚಂದ್ರ :— ಕಫಪ್ರಧಾನವಾದ ಎಲ್ಲ ರೋಗಗಳು, ಚಿಕ್ಕಮಕ್ಕಳಿಗೆ ಬರುವ ಎಲ್ಲ ರೋಗಗಳು, ಬಾಣಂತಿಯರಿಗೆ ಬರುವ ವಿಕಾರಗಳು, ಸ್ತ್ರೀರೋಗ ಗಳು, ಜಲೋದರ, ಪಾಂಡುತ, ಶ್ವಾಸ, ಕಾಸ, ಹಿಕ್ಕಾ, ನೆಗಡಿ, ಅಶಕ್ತತಾ, ಎಲ್ಲ ಮನೋರೋಗಗಳು, ಗಂಡಮಾಲೆ, ಗುಲ್ಮ, ಕುರ, ಚಳಿಜ್ವರ, ಪ್ರಮೇಹ, ಮಧುಮೇಹ, ಗರ್ಭಾಶಯ ವಿಕಾರ, ದೃಷ್ಟಿದೋಷ, ನಾಸಿಕಾ ರೋಗ, ಹುಚ್ಚು, ಹೊಟ್ಟೆ ವಿಕಾರ, ತಲೆಗೆ ಚಕ್ಕರ ಬರುವಿಕೆ, ಮೂರ್ಛಾ, ದೇಹದಲ್ಲಿ ನೀರು ಸಂಚಯ, ರಾಜಯಕ್ಷ್ಮಾ.

ಮಂಗಳ :— ಮಧ್ಯಮ ವಯಸ್ಕರಿಗೆ ಬರುವ ರೋಗಗಳು, ಪಿತ್ತ-ಪ್ರಧಾನ ರೋಗಗಳು, ಆಕಸ್ಮಿಕ ಅಪಘಾತಾದಿಗಳು, ಬಾವು, ದಾಹ, ಜ್ವರ ಗಳು. ಬ್ಲಡ್‌ಪ್ರೆಶರ್, ರಕ್ತಪಿತ್ತ, ಶಸ್ತ್ರಕ್ರಿಯೆ, ಗಾಯ, ವ್ರಣ, ಟಾಯ-ಫಾಯಿಡ್, ಮೈಲಿ, ಗೊಬ್ಬರ, ಪ್ಲೇಗು, ಸುಡುವಿಕೆ, ಮೂಗಿನ ವಿಕಾರ, ಸ್ನಾಯುವಿಕಾರ, ಭಗಂದರ, ಪಿಶಾರ, ರಕ್ತಸ್ರಾವ, ರಕ್ತವಾಹಿನಿ ಹರಿಯುವಿಕೆ, ಆಮಾಶಯಗತವ್ರಣ, ಆಂತ್ರಿಕವ್ರಣ, ಆಂತ್ರಿಕ ಪೃಚ್ಛಶೋಥ, ಆಮ್ಲಪಿತ್ತ ರಕ್ತಾರ್ಶ.

**ಬುಧ :—** ಮಜ್ಜಾತಂತುಗಳ ವಿಕಾರ, ಮಾನಸಿಕ ವಿಕಾರ, ತ್ವಚೆ ರೋಗಗಳು, ಕುಷ್ಟರೋಗ, ಉನ್ಮಾದ, ಶ್ವಾಸೋಚ್ಛ್ವಾಸಕಾರಕ ಕ್ರಿಯಾ ಸಂಬಂಧಿತ ರೋಗಗಳು, ಮಸ್ತಕ ಶೂಲ, ಅಪಸ್ಮಾರ, ನಿಮೋನಿಯಾ, ಪಕ್ಷಾಘಾತ, ಪುಪ್ಪುಸ ವಿಕಾರ, ಅಸ್ಥಮಾ, ಮಾತಿನಲ್ಲಿ ಅಸ್ಪಷ್ಟತೆ (ತೊದಲುವಿಕೆ, ಉಗ್ಗುವಿಕೆ (Stammering) ) ಮೂಕತ್ವ.

**ಗುರು :—** ಅಪಚನ, ಯಕೃತ್‌ವಿಕಾರ, ಪ್ಲೀಹದಲ್ಲಿ ದೋಷ, ಮಧುಮೇಹ, ಪ್ರಮೇಹ, ಪಾಂಡುತ, ಕಾಮಣಿ, ಜಲೋದರ, ಪ್ಲೂರಿಸಿ, ಪಕ್ಕಶೂಲೆ, ಗಳವಿಕಾರ, ಮೇದೋವೃದ್ಧಿ, ಬ್ಲಡ್‌ಪ್ರೆಶರ್, ರಕ್ತಾಧಿಕ್ಯ.

**ಶುಕ್ರ :—** ಉಪದಂಶ, ಪರ್ಮಾ, ಗನೋರಿಯಾ, ಮುಟ್ಟುದೋಷ, ಆರ್ತವವಿಕಾರ, ಯೋನಿದೋಷ, ವೀರ್ಯದೋಷ, ಮೂತ್ರವಿಕಾರ, ಎಲ್ಲ ಪ್ರಕಾರದ ಸ್ತ್ರೀರೋಗಗಳು, ಗರ್ಭಾಶಯ ಸಂಬಂಧದ ವಿಕಾರಗಳು, ಸ್ವರ ವಿಕಾರ, ಘಟಸರ್ಪ, ಕಾಲರಾ, ಮಧುಮೇಹ, ಪ್ರಮೇಹ.

**ಶನಿ :** ಸಂಧಿವಾತ, ಆಮವಾತ, ವಾತರಕ್ತ, ಪಕ್ಷಾಘಾತ, ಧನುರ್ವಾತ, ಜಂಘಾಪೃಷ್ಠಶೂಲ, ಪೋಲಿಯೋ, ಎಲ್ಲ ಪ್ರಕಾರದ ವಾತಪ್ರಧಾನ ರೋಗಗಳು, ಬಾಲಗ್ರಹ, ವೃದ್ಧಾಪ್ಯದಲ್ಲಿ ಬರುವ ರೋಗಗಳು, ದೀರ್ಘಾವಧಿ ಕಾಲದ ರೋಗಗಳು, ಅಸ್ಥಮಾ, ಕರ್ಣವಿಕಾರ, ದಂತವಿಕಾರ, ಅಸ್ತಿದೋಷ.

**ರಾಹು :—** ಮಾನಸಿಕ ವಿಕಾರ, ಮೂರ್ಛಾ, ಅಪಸ್ಮಾರ, ಕ್ಷುಧಾ, ಕ್ರಿಮಿಕೀಟಕಗಳಿಂದ ದಂಶ (ಹಾವು, ಚೇಳು, ಜಕ್ಕು, ನಾಯಿ, ಸಿಂಹ, ಹುಲಿ, ಕರಡಿ ಇತ್ಯಾದಿ ಪಶುಪ್ರಾಣಿಗಳಿಂದ ಗಾಯವಾಗುವಿಕೆ), ಭೂತ-ಪಿಶಾಚಿಗಳ ಸಂಬಂಧದ ವಿಕಾರ, ಮದ್ದು-ಮಾಟಗಳಿಂದಾಗುವ ವಿಕಾರ, ನಡಗುವಿಕೆ.

## ರವಿ

**ಮೇಷ :—** ಜ್ವರ, ರಕ್ತನ್ಯೂನತಾ, ಮಸ್ತಕಶೂಲ, ಅಪಸ್ಮಾರ, ವಾಚಾಭಂಗ, ಮಸ್ತಿಷ್ಕಾವರಣ, ಅರ್ಧಾಂಗವಾಯು, ಪೋಲಿಯೊ, ರಕ್ತ-ದೋಷ, ತ್ವಚೆರೋಗ.

**ವೃಷಭ :—** ಧ್ವನಿವಿಕಾರ, ದಾಹ, ಘಟಸರ್ಪ, ಕುತ್ತಿಗೆ ಶೋಥ, ಗಳವಿಕಾರ, ನಾಸಿಕಾರೋಗ.

**ಮಿಥುನ :—** ಕಾಸ, ನೆಗಡಿ, ಪ್ರತಿಶಾಯ, ಮಜ್ಜಾತಂತು ವಿಕಾರ, ಫುಪ್ಫುಸ ವಿಕಾರ, ಫುಪ್ಫುಸಾವರಣ, ಪ್ಲೂರಿಸೀ, ನಿಮೋನಿಯಾ.

**ಕರ್ಕ :—** ಅಗ್ನಿ ಮಾಂದ್ಯ, ಜಲೋದರ, ನಿಮೋನಿಯಾ, ಪ್ಲೂರಿಸಿ.

**ಸಿಂಹ :—** ಹೃದಯ ವಿಕಾರ, ಬಡ್‌ಪ್ರೆಶರ್, ರಕ್ತಪಿತ್ತ, ಭವಳಿ, ಚಕ್ಕರ ಬರುವಿಕೆ, ಬೆನ್ನು ವಿಕಾರ, ಬೆನ್ನೆಲುವಿನ ರೋಗ, ಆಮ್ಲಪಿತ್ತ; ಆಂತ್ರಿಕ ವ್ರಣ, ಆಂತ್ರಿಕಪಚ್ಛಶೋಥ, ತೀವ್ರಜ್ವರ, ಟಾಯ್‌ಫಾಯಿಡ್, ರಕ್ತವಿಕಾರ,

**ಕನ್ಯಾ :—** ಅತಿಸಾರ, ಅಪಚನ, ಛರ್ದಿ, ಅಗ್ನಿಮಾಂದ್ಯ, ಕಾಲರಾ, ಡೈಯೇರಿಯಾ.

**ತುಲಾ :—** ಅಗ್ನಿಮಾಂದ್ಯ, ಚಳಿಜ್ವರ, ಮೂತ್ರವಿಕಾರ, ತ್ವಚೆರೋಗ.

**ವೃಶ್ಚಿಕ :—** ಮೂತ್ರಾಶ್ಮರಿ (ಮೂತ್ರಪಿಂಡದಲ್ಲಿ ಹರಳು), ಭಗಂದರ, ಅಪೆಂಡಿಸೈಟಿಸ್, ಕುತ್ತಿಗೆಯ ವಿಕಾರ.

**ಧನು :—** ಜಂಘಾಪೃಷ್ಠಶೋಥ, ಫುಪ್ಫುಸವಿಕಾರ, ರಕ್ತಪಿತ್ತ, ಬ್ಲಡ್-ಪ್ರೆಶರ್, ಹೃದಯವಿಕಾರ, ಪಕ್ಷಾಘಾತ.

**ಮಕರ :—** ಸಂಧಿವಾತ, ತ್ವಚೆರೋಗ.

**ಕುಂಭ :—** ರಕ್ತದೋಷ, ಹೃದಯವಿಕಾರ, ಕಾರ್ಬಾನಿಕ್ ಆ್ಯಸಿಡ್ ಗ್ಯಾಸ ಆಗುವಿಕೆ, ದಮ್ಮು.

**ಮೀನ :—** ಮೂತ್ರರೋಗ, ಗರ್ಭಾಶಯ ದೋಷ, ಫುಪ್ಫುಸ-ವಿಕಾರ, ಮಜ್ಜಾತಂತುವಿನ ವಿಕಾರ.

## ಚಂದ್ರ

**ಮೇಷ :—** ದೃಷ್ಟಿಮಾಂದ್ಯ, ಮಸ್ತಕಶೂಲ, ನಿದ್ರಾನಾಶ, ನೆಗಡಿ, ಶೈತ್ಯ, ಶೀತಜ್ವರ, ಕೇಶಗಳು ಉದುರುವಿಕೆ.

**ವೃಷಭ**:— ಗಂಟಲು ನೋವು, ಟಾನ್ಸಿಲ್ಸ್, ಗಂಟಲಲ್ಲಿ ಬಾವು, ವ್ರಣ, ಕಣ್ಣಿನ ಕಿರುಕುಳ, ಮೂಗಿನ ವಿಕಾರ.

**ಮಿಥುನ**: ಪುಪ್ಪುಸವಿಕಾರ, ಪುಪ್ಪುಸಾವರಣ, ಕಾಸ, ಶ್ವಾಸ. ಶೈತ್ಯ, ನಿಮೋನಿಯಾ, ದೋಷರಕ್ತದಿಂದ ಶಿರ-ಧಮನಿಗಳಲ್ಲಿ ನೋವು.

**ಕರ್ಕ**:— ಜಲೋದರ, ಮಂದಾಪೃದ್ಧಿ. ಕಾಸ, ನೆಗಡಿ, ಶೈತ್ಯ, ಎದೆ ನೋವು, ಹೊಟ್ಟೆಯಲ್ಲಿ ವಾತ ತುಂಬುವಿಕೆ.

**ಸಿಂಹ**: ಮೂರ್ಛೆ, ಹೃದಯವಿಕಾರ, ಕರುಳಿನ ವಿಕಾರ, ಯಕೃತ್ ವಿಕಾರ ಬೆನ್ನು ಹುರಿಯ ವಿಕೃತಿ.

**ಕನ್ಯಾ**: ಕರಳು ದೌರ್ಬಲ್ಯ, ಕರಳಿಗೆ ಬಾವು ಬರುವಿಕೆ, ಮಸ್ತಕ ಶೂಲ, ಉನ್ಮಾದ, ಟೈಫೈಡ್. ಅಪಚನ, ಅಗ್ನಿಮಾಂದ್ಯ, ಅತಿಸಾರ, ಗುಲ್ಮ, ನಿಮೋನಿಯಾ, ಪೆಪ್ಟಿಕ್ ಅಲ್ಸರ್, ಆಂತ್ರಪುಚ್ಛಶೋಥ.

**ತುಲಾ**:— ಬಸ್ತಿವಿಕಾರ, ಮೂತ್ರಾಘಾತ, ಮೂತ್ರವಿಕಾರ, ಕಾಲರಾ, ಮಧುಮೇಹ, ಪ್ರಮೇಹ, ಸ್ತ್ರೀರೋಗ.

**ವೃಶ್ಚಿಕ**: ವೃಷಣವೃದ್ಧಿ, ಮೂತ್ರವಿಕಾರ, ಹರ್ನಿಯಾ, ಪ್ರಮೇಹ, ಮಧುಮೇಹ, ಮೂಲವ್ಯಾಧಿ, ಸ್ತ್ರೀರೋಗ.

**ಧನು**:— ಆಮವಾತ, ಸಂಧಿವಾತ, ಮಜ್ಜಾತಂತು ದೌರ್ಬಲ್ಯ, ಆಸನಾಸ್ಥಿ ಸಂಬಂಧಿಸಿದ ವಿಕಾರ, ಟೊಂಕದಲ್ಲಿ ನೋವು, ಧರ್ನುವಾತ, ಪೋಲಿಯೋ.

**ಮಕರ**:— ಅಸ್ಥಿವಿಕಾರ, ತ್ವಚೆವಿಕಾರ, ಸಂಧಿವಿಕಾರ.

**ಕುಂಭ**:— ಕಾಲಿನ ಶಿರ, ಹಿಮ್ಮಡದಲ್ಲಿ ದೋಷ, ರಕ್ತವಿಕಾರ, ಹೊಟ್ಟೆನೋವು, ಮೇದೋವೃದ್ಧಿ.

**ಮೀನ**: — ಮದ್ಯದ ವಿಕಾರ, ಜಲೋದರ, ಸ್ನಾಯು ದೌರ್ಬಲ್ಯ, ಕಾಸ, ಶ್ವಾಸ, ಕಫವಿಕಾರ.

## ಮಂಗಳ

**ಮೇಷ:**— ತಲೆಯಲ್ಲಿ ತೀವ್ರವೇದನೆ. ತಲೆಯಲ್ಲಿಯ ಧಮನಿಗಳಲ್ಲಿಯ ರಕ್ತಸ್ರಾವ, ಆಘಾತ, ನಿದ್ರಾನಾಶ, ಮೆದುಳಿನ ವಿಕಾರ, ರಕ್ತ ಸಂಚಯ, ಶೋಥ, ಮಜ್ಜಾತಂತು ವಿಕಾರ, ಪ್ಲೇಗು, ಮೈಲಿ, ಗೊಬ್ಬರ, ಗಜಕರ್ಣ.

**ವೃಷಭ:**— ಶ್ವಸನ ನಲಿಕೆಯಲ್ಲಿ ದಾಹ, ಕುತ್ತಿಗೆಯಲ್ಲಿ ಬಾವು-ಗಂಟು, ಟಾನ್ಸಿಲ್ ವಿಕಾರ, ನಾಸಿಕಾವಿಕಾರ, ನಾಸಿಕಾದಾಹ, ನಾಸಿಕಾಅರ್ಶ, ಘಟಸರ್ಪ, ಕಿರುನಾಲಿಗೆ ಬಿಳುವಿಕೆ, ಹುಗುಳು, ಕರ್ಣಶೂಲ, ಸಂಧಿವಾತ.

**ಮಿಥುನ:** – ಮಜ್ಜಾತಂತು ದುರ್ಬಲ, ಮಜ್ಜಾತಂತುವಿನಲ್ಲಿ ವಿಕೃತಿ, ಆಘಾತ, ಅಸ್ಥಿಗಳು ಮುರಿಯುವಿಕೆ, (Bone fractures) ಕೈಕಾಲುಗಳ ಎಲವುಗಳು ಸರಿಯುವಿಕೆ, ಸಂಧಿ ಸರಿಯುವಿಕೆ, ಕಾಸ, ಪಿತ್ತಾತಿಸಾರ, ನಿಮೋನಿಯಾ, ಎದೆಯಿಂದ ರಕ್ತಬೀಳುವಿಕೆ (ವಕ್ಷತ), ಮುಖದಿಂದ ರಕ್ತ ಬೀಳುವಿಕೆ, ಪಿತ್ತ, ಮಜ್ಜಾತಂತುದಾಹ.

**ಕರ್ಕ:**— ಒಣ ಕೆಮ್ಮು, ಹೊಟ್ಟೆನೋವು, ಹೊಟ್ಟೆ ಉಬ್ಬುವಿಕೆ, ಸಣ್ಣ ಕರುಳಿಗೆ ಶೋಥ, ಅಗ್ನಿಮಾಂದ್ಯ, ಸ್ತನಗಳಿಗೆ ಗಂಟು, ಸ್ತನವಿಕಾರ, ಪಿತ್ತಜ ಛರ್ದಿ.

**ಸಿಂಹ:**— ಹೃದಯ ವಿಕಾರ, ಬ್ಲಡ್‌ಪ್ರೆಶರ್, ರಕ್ತಪಿತ್ತ, ಎಲವು ಮುರಿಯುವಿಕೆ, ಬೆನ್ನೆಲವು ನೋವು, ಶ್ವಾಸೋಚ್ಛ್ವಾಸ ತೀವ್ರವಾಗುವಿಕೆ, ಧಮನಿಯಲ್ಲಿ ಶೋಥ, ಹೃತ್‌ಶೂಲ, ಅಂತಸ್ತ್ವಚೆಯಲ್ಲಿ ಶೋಥ, ಸಂಧಿ ವಿಕಾರ, ಟೈಫೈಡ್, ಪ್ಲೇಗ್.

**ಕನ್ಯಾ:**— ಹೇಲಾಟ, ಆಮಶಂಕೆ, ಜಂತು, ಕ್ರಿಮಿ, ಕಾಲರಾ, ಹರ್ನಿಯಾ, ಟೈಫೈಡ್, ಕರುಳಿನ ವಿಕಾರಗಳು.

**ತುಲಾ:**— ಮೂತ್ರಪಿಂಡಕ್ಕೆ ಬಾವು, ಮೂತ್ರಾಘಾತ, ಉರಿಮೂತ್ರ.

**ವೃಶ್ಚಿಕ:**— ಉರಿಮೂತ್ರ, ಲಿಂಗ-ಯೋನಿಗಳಲ್ಲಿ ದಾಹ, ಗರ್ಭ ವಿಕಾರ, ಹರ್ನಿಯಾ, ನಾಸಿಕಾದಾಹ, ಮೂತ್ರಾಶ್ಮರಿ, ಆರ್ತವ ವಿಕಾರ,

ಸನ್ನಿಪಾತ, ಮಧುಮೇಹ, ಗರ್ಭಾಶಯ ದಾಹಕ್ಕೆ ಸಣ್ಣ ಹಾಗೂ ದೊಡ್ಡ ಕರುಳಿನಲ್ಲಿ ಗಂಟು ಹಾಗೂ ದಾಹ, ಅಂಪೆಡಿಸೈಟಿಸ್.

**ಧನು**:— ಸ್ಯಟಿಕಾ, ತಿಕಶೂಲ, ಉರಶೂಲ, ವ್ರಣ, ಅಂತರ್ಜ್ವರ, ಬೆನ್ನು ಹಾಗೂ ನಡ ನೋವು, ಪಿತ್ತವಿಕಾರ.

**ಮಕರ**:— ಆಮವಾತ, ಸಂಧಿವಾತ, ತ್ವಚೆರೋಗ, ರಕ್ತವಿಕಾರ, ಜ್ವರಕ್ಕೆ ಕೈಕಾಲುಗಳಿಗೆ ಅಪಘಾತ (Bone fracture).

**ಕುಂಭ**:— ತೀವ್ರ ರಕ್ತಸ್ರಾವ, ವಿಷಸರ್ಪದಂಶ, ಕೈಕಾಲಿನ ತುದಿಗೆ ಬಹಳ ಬೆವರು.

**ಮೀನ**:— ಕಫ ವಿಕಾರ, ಕೈಕಾಲು ತುದಿಗೆ ಬಹಳ ಬೆವರು.

ಬುಧ

**ಮೇಷ**:— ಮಸ್ತಕಶೂಲ; ಉನ್ಮಾದ; ಭ್ರಮ; ಮೂರ್ಛಾ; ಮೆದುಳಿನ ವಿಕಾರ, ಅರ್ಧತಲೆಶೂಲೆ.

**ವೃಷಭ**:— ಸ್ವರವಿಕಾರ; ಕಂಠವಿಕಾರ; ವಾಣಿವಿಕಾರ; ತುತ್ತು ನುಂಗಲು ತ್ರಾಸಾಗುವಿಕೆ.

**ಮಿಥುನ**:— ಆಮವಾತ; ತಲೆನೋವು; ಬಾವು; ದಮ್ಮು; ನಿಮೋನಿಯಾ; ಪ್ಲೂರಿಸಿ; ಛರ್ದಿ; ಕಾಸ; ಅರದಲೆ; ಎದೆನೋವು; ಹೃದಯ ವೇದನೆ.

**ಕರ್ಕ**:— ಅಪಚನ; ಹೊಟ್ಟೆಯಲ್ಲಿ ವಾತ; ಮೇದೋವೃದ್ಧಿ; ಮಜ್ಜಾತಂತುವಿನಲ್ಲಿ ವಿಕಾರ; ಮೂರ್ಛಾ; ಬಡಬಡಿಸುವಿಕೆ; ಹೊಟ್ಟೆಶೂಲಿ.

**ಸಿಂಹ**:— ಮೂರ್ಛಾ; ಬೆನ್ನುನೋವು; ಪೋಲಿಯೋ; ಪಕ್ಷಾಘಾತ; ತ್ವಚೆವಿಕಾರ; ಉನ್ಮಾದ; ಅಪಸ್ಮಾರ; ಶ್ವಾಸೋಚ್ಛ್ವಾಸದಲ್ಲಿ ವಿಕೃತಿ.

**ಕನ್ಯಾ**:— ಅಗ್ನಿಮಾಂದ್ಯ; ವಾತವಿಕಾರ;ಕರುಳಿನ ವಿಕಾರ, ಅತಿಸಾರ; ಆಮಾಂಶ, ಅಪೆಂಡಿಸೈಟಿಸ್; ಉನ್ಮಾದ; ಮಸ್ತಕಶೂಲ.

**ತುಲಾ**:— ಮೂತ್ರ ಹನಿ ಹನಿಯಾಗುವಿಕೆ, ಬಸ್ತಿವಿಕಾರ.

**ವೃಶ್ಚಿಕ:** – ಜನನೇಂದ್ರಿಯ ಸಂಬಂಧಿಸಿದ ವಿಕಾರ; ಮುಟ್ಟುದೋಷ; (ಆರ್ತವ ದೋಷ) ಗರ್ಭಾಶಯ ವಿಕಾರ; ಮುಟ್ಟುಸ್ರಾವಕಡಿಮೆಯಾಗುವಿಕೆ.

**ಧನು:** ತೊಡೆ ಹಾಗೂ ಟೊಂಕದ ಕೆಳಭಾಗದಲ್ಲಿ ನೋವು; ಜಂಘಾ ಪೃಷ್ಠಶೂಲ; ಪಕ್ಷಾಘಾತ, ಭಯವಿಕಾರ, ಕಂಡು, ಇಸಬು, ತ್ವಚೆ ವಿಕಾರ.

**ಮಕರ:** — ಮೊಣಕಾಲು ಹಾಗೂ ಮುಂಡಿ (ಚಿಪ್ಪು)ಗಳಲ್ಲಿಯ ಶಿರಾ-ಧಮನಿಗಳಲ್ಲಿ ಶೋಥ, ವಾತರಕ್ತ, ಸಂಧಿವಿಕಾರ, ಸಂಧಿವಾತ, ಗೃಧ್ರಸೀವಾತ, ರಕ್ತಸಂಚಯ, ತ್ವಚೆರೋಗ.

**ಕುಂಭ:**— ಕೈಕಾಲು ಮುರಿಯುವಿಕೆ, ಕುಂಟತನ, ಹಿಮ್ಮಡದಲ್ಲಿ ನೋವು, ಸಂಧಿವಾತ, ವಾತರಕ್ತ, ರಕ್ತವಿಕಾರ, ತ್ವಚೆವಿಕಾರ, ಹೃದಯ ವಿಕಾರ, ಪಕ್ಷಾಘಾತ.

**ಮೀನ:** – ಕಿಪ್ಪೊಟ್ಟೆಯಲ್ಲಿ ನೋವು, ಕೈಕಾಲು ತೀವ್ರ ತಂಪಾಗುವಿಕೆ, ಸ್ಮರಣಶಕ್ತಿಯ ನಾಶ, ಕ್ಷಯ, ಉನ್ಮಾದ, ಮಾನಸಿಕ ವ್ಯಥೆ.

## ಗುರು

**ಮೇಷ:**— ತಲೆಯ ಕಡೆಗೆ ರಕ್ತಸ್ರಾವ, ಮಸ್ತಕದಲ್ಲಿ ರಕ್ತಸಂಚಯ, ಚಕ್ರ ಬರುವಿಕೆ, ರಕ್ತವಿಕೃತಿ.

**ವೃಷಭ:**— ಟಾನ್ಸಿಲ್, ಹುಗುಳ, ಮೇದೋವೃದ್ಧಿ, ಆಮವಾತ, ಅಗ್ನಿಮಾಂದ್ಯ, ಅಪಚನ.

**ಮಿಥುನ:**— ಪ್ಲುರಿಸಿ, ರಕ್ತಸಂಚಯ, ಪುಪ್ಪುಸ ವಿಕೃತಿ, ಮೇದೋ-ವೃದ್ಧಿ, ಯಕೃತ್ತಿನ ವಿಕಾರ, ಅಪಸ್ಮಾರ.

**ಕರ್ಕ:**— ಜಲೋದರ, ಅಪಚನ ವಿಕಾರ, ಅಗ್ನಿಮಾಂದ್ಯ, ಭಸ್ಮಕ ರೋಗ, ಯಕೃತ್ ವಿಕಾರ, ಕಾಸ ವಿಕಾರ, ಕಫವಿಕಾರ.

**ಸಿಂಹ:**— ಜ್ವರ, ಹೃದಯ ವಿಕಾರ, ಶ್ವಾಸೋಚ್ಛ್ವಾಸ ತೀವ್ರವಾಗುವಿಕೆ, ಬೆನ್ನು ಹುರಿಯಲ್ಲಿ ನೀರು ತುಂಬುವಿಕೆ.

**ಕನ್ಯಾ:**— ಕ್ಷಯ, ಯಕೃತ್ ವಿಕಾರ, ಸಣ್ಣ ಕರುಳಿನ ವಿಕಾರ, ಅಗ್ನಿ-ಮಾಂದ್ಯ, ಅಪಚನ, ಅತಿಸಾರ, ಕಾಲರಾ, ಟಾಯಫಾಯಿಡ್.

**ತುಲಾ:**— ರುಧಿರಾಭಿಸರಣ ತೀವ್ರತೆ, ಕರುಳು ವಿಕೃತಿ, ಗಂಟಾಗುವಿಕೆ, ಮೂತ್ರಪಿಂಡದಲ್ಲಿ ಗುಲ್ಮ, ಪ್ಲೂರಿಸಿ, ಉದರವಿಕಾರ, ಜಲೋದರ.

**ವೃಶ್ಚಿಕ:**— ಮೂಲವ್ಯಾಧಿ, ಜಲೋದರ, ಮೂತ್ರಕೃಚ್ಛ್ರ, ಪ್ರಮೇಹ, ಮಧುಮೇಹ, ಅತಿಸಾರ.

**ಧನುः** — ತೊಡೆ ನೋವು, ತಿಕಶೂಲ, ಬಾಹುಶೂಲ, ಆಮವಾತ, ಸಂಧಿವಾತ, ಮೇದೋವೃದ್ಧಿ, ಸ್ನಾಯುವಿಕಾರ, ಅಸ್ಥಿವಿಕಾರ, ರಕ್ತವಿಕಾರ, ರಕ್ತಪಿತ್ತ, ರಕ್ತ ಒತ್ತಡ.

**ಮಕರ:**— ತ್ವಚೆವಿಕಾರ, ರಕ್ತವಿಕಾರ, ಸಂಧಿವಿಕಾರ, ವ್ರಣವಿಕಾರ, ರಕ್ತದೋಷ.

**ಕುಂಭ:**— ಟೊಂಕ ನೋವು, ರಕ್ತದೋಷ, ವಿಷಬಾಧೆ, ಮೊಳಕಾಲಿನಲ್ಲಿ ನೋವು, ಹೃದಯದಲ್ಲಿ ಜಲಸಂಚಯ (Heart dropsy).

**ಮೀನ:**— ಜಲರೋಗ, ಯಕೃತ್‌ವಿಕಾರ, ಹೃದಯವಿಕಾರ, ಕಫವಿಕಾರ ಜಲೋದರ, ಕಾಸ, ಶ್ವಾಸ, ಪ್ರಮೇಹ, ಮೇದೋವೃದ್ಧಿ.

## ಶುಕ್ರ

**ಮೇಷ:**— ತಲೆಯಲ್ಲಿ ಶೈತ್ಯ, ತ್ವಚೆರೋಗ, ಮಸ್ತಕಶೂಲ, ನೇತ್ರವಿಕಾರ, ವಿಷಜನ್ಯ, ರಕ್ತದೋಷ.

**ವೃಷಭ:**— ಕಂಠದಲ್ಲಿ ಶೋಥ, ಟಾನ್ಸಿಲ್, ಸ್ವರವಿಕಾರದಲ್ಲಿ ದೋಷ, ಕಾಸ, ಡಿಫ್ತೇರಿಯಾ, ಜಿಹ್ವಾವಿಕಾರ, ಗ್ರಂಥಿ, ಅಪಚಿ, ತುರಿಕೆ.

**ಮಿಥುನ:**— ಸ್ನಾಯುಪುಚ್ಛ, ಗ್ರಂಥಿ, ಫುಪ್ಫುಸ ವಿಕಾರ.

**ಕರ್ಕ:**— ಛರ್ದಿ, ಹೊಟ್ಟೆ ದೊಡ್ಡದಾಗುವಿಕೆ, ಮಳಮಳವೆನ್ನುವಿಕೆ, ಎದೆನೋವು, ಕಾಸ, ಶ್ವಾಸ.

**ಸಿಂಹ:**— ಹೃದಯ ವಿಕಾರ, ಬೆನ್ನುನೋವಿನ ವಿಕಾರ, ರಕ್ತಾಶಯದಲ್ಲಿ ದೊಡ್ಡ ಧಮನಿಗಳಲ್ಲಿ ವಿಕೃತಿ.

**ಕನ್ಯಾ:**— ಕರಳು ದುರ್ಬಲತೆ, ವಾತಾತಿಸಾರ.

**ತುಲಾ:**— ಮೂತ್ರಪಿಂಡ ದುರ್ಬಲ, ಬಣ್ಣಬಣ್ಣದ ಮೂತ್ರ ವಾಗುವಿಕೆ.

**ವೃಶ್ಚಿಕ:**— ಉಪದಂಶ, ಸ್ತ್ರೀರೋಗ, ಮೂತ್ರಪಿಂಡದ ದೌರ್ಬಲ್ಯ, ಗರ್ಭಾಶಯ ದೋಷ, ಯೋನಿ ಮಾರ್ಗದಲ್ಲಿ ದೋಷ, ಪ್ರದರ, ಗರ್ಭಾಶಯ ಭ್ರಂಶ, ವೃಷಣವೃದ್ಧಿ, ವೃಷಣವಿಕೃತಿ.

**ಧನು:** — ಆಮವಾತ, ವಾತರಕ್ತ, ತೊಡೆಯ ಮೇಲೆ ಗುಲ್ಮ.

**ಮಕರ:**— ರಕ್ತವಿಕಾರ, ತ್ವಚೆವಿಕಾರ, ಛರ್ದಿ.

**ಕುಂಭ:**— ರಕ್ತದೋಷ, ಹೃದಯವಿಕಾರ, ಪಕ್ಷಾಘಾತ.

**ಮೀನ:** — ಆಮವಾತ, ಕಾಲಿನಲ್ಲಿ ಯಾವಾಗಲೂ ತಂಪಾಗುವಿಕೆ, ಜ್ವರ ಬರುವಿಕೆ, ಪರಮಾ, ಉಪದಂಶ, ಸ್ತ್ರೀರೋಗ, ಕಫವಿಕಾರ.

## ಶನಿ

**ಮೇಷ:**— ನೆಗಡಿ, ಶೀತ, ಕಿವುಡುತನ, ದಂತವಿಕಾರ, ಪಕ್ಷಾಘಾತ. ಸಂಧಿವಾತ, ಮಸ್ತಕಶೂಲ, ಮೆದುಳು ವಿಕಾರ, ಅಪಸ್ಮಾರ, ಉನ್ಮಾದ.

**ವೃಷಭ:**— ಗಂಟಲ ನೋವು, ಅಂಗಳು ನೋವು, ವಾಣಿದೋಷ, ನಾಶಿಕಾವಿಕಾರ, ಶ್ವಾಸೋಚ್ಛ್ವಾಸದ ವಿಕಾರ, ಕಫವಿಕಾರ, ಸ್ವರವಿಕಾರ, ಗುದವಿಕಾರ, ಘಟಸರ್ಪ, ಕೀವು, ಕೊಳೆ.

**ಮಿಥುನ:**— ಕೈನೋವು, ಪುಪ್ಪುಸ ವಿಕಾರ, ಸಂಧಿವಾತ, ವಾತರಕ್ತ, ಕ್ಷಯ, ಸ್ಕಂಧವಿಕಾರ, ಕೋಡಿಗ್ಗಮ್ಮು, ಶ್ವಾಸಾವರೋಧ, ಕಂಪನ.

**ಕರ್ಕ:**— ದಮ್ಮು, ಸ್ತನವಿಕೃತಿ, ಸ್ತನವಿಕಾರ, ಅಗ್ನಿ ಮಾಂದ್ಯ, ಅಪಚನ, ಎದೆನೋವು, ಹೊಟ್ಟೆ ಶೂಲೆ, ಹೊಟ್ಟೆಯಲ್ಲಿ ವಾತ ತುಂಬುವಿಕೆ, ಛರ್ದಿ, ಕ್ಯಾನ್ಸರ್ (ಸ್ತನ ಕ್ಯಾನ್ಸರ್). ಗುದದ್ವಾರದಲ್ಲಿ ಕ್ಯಾನ್ಸರ್. ಕಮರ-ದೇಗು, ಮೇಲಿಂದ ಮೇಲೆ ಡೇಕರಿಕೆ, (dipsomeniya).

**ಸಿಂಹ:**— ಯಾವತ್ತೂ ಅವಯವಗಳ ಒಣಗುವಿಕೆ, ಕ್ಷಯ, ಹೃದಯ ಕ್ರಿಯೆ ದುರ್ಬಲವಾಗುವಿಕೆ, ಬೆನ್ನು ನೋವು, ಹೃತ್‌ಶೂಲ. ಬೆನ್ನುಹುರಿಯಲ್ಲಿ ವಿಕೃತಿ, ಆಮವಾತ. ಪೃಷ್ಠರಜ್ಜುದಲ್ಲಿ ತೊಂದರೆ.

**ಕನ್ಯಾ :** — ಸಂಗ್ರಹಿಣಿ, ಕೋಷ್ಠಬದ್ಧತಾ, ಪಕ್ವಾಶಯ ವಿಕೃತಿ, ಅಪಚನ, ಯಕೃತ್ತು ದೊಡ್ಡದಾಗುವಿಕೆ.

**ತುಲಾ :**— ನಾರುಹುಣ್ಣು, ಅಶುದ್ಧ ರಕ್ತ, ಮೂತ್ರಪಿಂಡದಲ್ಲಿ ದಾಹ, ಮೂತ್ರಾವರೋಧ, ಮೂತ್ರಾಶ್ಮರಿ.

**ವೃಶ್ಚಿಕ :**— ಮೂತ್ರಾವರೋಧ, ಮೂತ್ರಕೃಛ್, ಆಮವಾತ, ಮೂಲವ್ಯಾಧಿ, ಭಗಂದರ, ಮೂತ್ರದಲ್ಲಿ ಉಸುಕು ಬೀಳುವಿಕೆ, ಹರ್ನಿಯಾ, ವೃಷಣವೃದ್ಧಿ, ಆರ್ತವವಿಕಾರ, ನಾಶಿಕದಲ್ಲಿ ಅಸ್ಥಿ ಆಗುವಿಕೆ.

**ಧನು :**— ಆಮವಾತ, ವಾತರಕ್ತ, ಸಂಧಿವಾತ, ಜಂಘಾಪೃಷ್ಠಶೂಲ, ಅಸ್ಥಿವಿಕೃತಿ.

**ಮಕರ :**— ಶಿರಾಗತ, ಸಂಧಿಗತ ವಾತ, ತ್ವಚೆರೋಗ, ಆಮವಾತ, ವಾತರಕ್ತ.

**ಕುಂಭ :**— ಸಂಧಿವಾತ; ಮೊಳಕಾಲು, ತೊಡೆನೋವು, ಹಿಮ್ಮಡ-ನೋವು, ಪಕ್ವಾಶಯದಲ್ಲಿ ವಿಕೃತಿ, ರಕ್ತವಿಕೃತಿ ಸಂಧಿ ತಪ್ಪುವಿಕೆ, ಕಾಲು ಬಳಬಳ ಅನ್ನುವಿಕೆ, ಅಶಕ್ತತೆ, ಪೃಷ್ಠರಜ್ಜು ವಿಕೃತಿ, ಅಸ್ಥಿವ್ರಣ, ಧಮನಿಶೂಲ.

**ಮೀನ :**— ಗಂಡಮಾಲೆ; ಪಾದವ್ರಣ, ಕಾಲಿಗೆ ತೂತು ಬೀಳುವಿಕೆ, ಸೀಳುವಿಕೆ, ಆಮವಾತ, ಕ್ಷಯ, ಅಸ್ಥಿವಿಕೃತಿ.

### ರಾಹು-ಕೇತು

ರಾಹುವಿನ ಗುಣಧರ್ಮ ಆರೋಗ್ಯದ ವಿಷಯವಾಗಿ ರವಿ-ಮಂಗಳರಂತೆ ಇರುತ್ತದೆ. ಕೇತುವಿನ ಗುಣಧರ್ಮವು ಶನಿ-ಬುಧರಂತೆ ಇರುವದು.

ಜನ್ಮಕುಂಡಲಿಯಲ್ಲಿ ಷಷ್ಠ-ದ್ವಾದಶ ಸ್ಥಾನಗಳಲ್ಲಿ ಕೇತುವಿದ್ದರೆ ಶರೀರ ದಲ್ಲಿಯ ಸ್ನಾಯುವಿನ ಮೇಲ ಹಾಗೂ ಮಜ್ಜಾತಂತುವಿನ ಮೇಲೆ ದೋಷ ವನ್ನುಂಟುಮಾಡುತ್ತಾನೆ.

ಮೇಷ, ಕರ್ಕ, ವೃಶ್ಚಿಕ, ಧನು, ಮೀನ ಈ ರಾಶಿಗಳಲ್ಲಿ ರಾಹು ಇದ್ದರೆ ದುಷ್ಟ ಫಲವನ್ನು ಕೊಡುವನು. ಉಳಿದ ರಾಶಿಯಲ್ಲಿದ್ದರೆ ಶುಭ ಫಲವನ್ನು ಕೊಡುವನು.

ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮೀನ, ಈ ರಾಶಿಯ ರಾಹು ದ್ವಿತೀಯ ಸ್ಥಾನದಲ್ಲಿದ್ದರೆ ಮುಖರೋಗವನ್ನು ಮಾಡುವನು. ಇದೇ ರಾಶಿಗಳ ರಾಹು ಅಷ್ಟಮದಲ್ಲಿದ್ದರೆ ವೃದ್ಧಾಪ್ಯದಲ್ಲಿ ಬರುವ ಬೇನೆಗಳನ್ನು ನಿರ್ಮಾಣ ಮಾಡುವನು.

ಮೇಷ, ಕರ್ಕ, ವೃಶ್ಚಿಕ, ಕುಂಭ, ಮೀನ ಈ ರಾಶಿಗಳ ರಾಹು ಅಷ್ಟಮದಲ್ಲಿದ್ದರೆ ವಿಷಾರಿ ಜಂತುಗಳ ಹಾಗೂ ಪ್ರಾಣಿಗಳಿಂದ ಭೀತಿ ಇರುತ್ತದೆ.

ಲಗ್ನ, ದ್ವಿತೀಯ, ಅಷ್ಟಮ ವ್ಯಯದಲ್ಲಿ ರಾಹುವಿದ್ದರೆ ಭೂತವಿಕಾರ ವಾಗುತ್ತದೆ.

ಅಶುಭ ರಾಶಿಯ ಕೇತು ದ್ವಾದಶದಲ್ಲಿದ್ದರೆ ಜಾತಕನು ರುಗ್ಣಾಲಯದಲ್ಲಿ ಬಹಳ ದಿನಗಳ ವರೆಗೆ ಇರಬೇಕಾಗುತ್ತದೆ.

## ತ್ರಿದೋಷದ ವಿಷಯವಾಗಿ ಗ್ರಹಗಳ ಸಂಬಂಧ

ಸೂರ್ಯ : ಪಿತ್ತದೋಷ ಚಂದ್ರ : ಕಫ ದೋಷ
ಮಂಗಳ : ಪಿತ್ತದೋಷ ಬುಧ : ವಾತ-ಪಿತ್ತ-ಕಫ ತ್ರಿದೋಷ
ಗುರು : ಕಫದೋಷ ಶುಕ್ರ : ವಾತ-ಕಫ ದ್ವಿದೋಷ
ಶನಿ : ವಾತದೋಷ

---

# ೩

## ಆಯುರ್ದಾಯ ವಿಚಾರ

ವೈದ್ಯಶಾಸ್ತ್ರದಲ್ಲಿ ಆರೋಗ್ಯ ರಕ್ಷಣೆ–ಆರೋಗ್ಯ ಪೋಷಣೆಗಳು ಒಂದು ಭಾಗವಾದರೆ ರೋಗನಿದಾನ–ರೋಗನಿವಾರಣೆ ಇವು ಅದರ ಇನ್ನೊಂದು ಭಾಗ. ಆದರೆ ಜ್ಯೋತಿಷ್ಯದ ಪ್ರಪ್ರಥಮ ದೃಷ್ಟಿಯೆಂದರೆ ಮನುಷ್ಯನ ಆಯುರ್ವರ್ಧನ ( Life span ). ಏಕೆಂದರೆ ರೋಗಿಯ ಆಯುರ್ವರ್ಧನವೇ ಮುಗಿದಿದ್ದರೆ ಅವನ ರೋಗನಿವಾರಣೆಯ ಪ್ರಶ್ನೆಯೇ ಬರೋದಿಲ್ಲ. ಇದೂ ಅಲ್ಲದೆ ಆಯುಷ್ಯ ಮುಗಿದವ ಏನೂ ರೋಗವಿಲ್ಲದೆ ಸಾಯಬಹುದು. ಹೀಗಿರುವಾಗ ರೋಗ ಬಂದರೆ ಹೇಳಬೇಕೆ! ಆದುದರಿಂದ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜಾತಕನ ಆಯುರ್ವರ್ಧನದ ನಿರ್ಧಾರ ಮೊದಲು ಮಾಡಿಕೊಂಡು ನಂತರ ರೋಗನಿವಾರಣೆಯ ಸಾಧ್ಯಾಸಾಧ್ಯತೆಯನ್ನು ನಿರ್ಧರಿಸಬೇಕಾಗುತ್ತದೆ. ಪ್ರಸ್ತುತ ಈ ಪ್ರಕರಣದಲ್ಲಿ ಜಾತಕದ ಆಧಾರದ ಮೇಲಿಂದ ಆಯುರ್ದಾಯವನ್ನು ಹೇಗೆ ನಿರ್ಧರಿಸಬೇಕೆಂಬುದನ್ನು ವಿವರಿಸಲಾಗಿದೆ.

### ಆಯುರ್ದಾಯದಲ್ಲಿಯ ಪ್ರಕಾರ

ಆಯುರ್ದಾಯದ ವಿಚಾರ ಮಾಡುವಾಗ ನಾವು ಸ್ಥೂಲವಾಗಿ ಮೂರು ರೀತಿಯಿಂದ ವಿಂಗಡಿಸಬಹುದು. ೧) ಅಲ್ಪಾಯು ೨) ಮಧ್ಯಮಾಯು ೩) ದೀರ್ಘಾಯು.

೧) ಅಲ್ಪಾಯುವೆಂದರೆ ೮ ರಿಂದ ೩೨ ವಯಸ್ಸಿನ ವರೆಗೆ.

೨) ಮಧ್ಯಮಾಯುವೆಂದರೆ ೩೨ ರಿಂದ ೬೪ ವಯಸ್ಸಿನ ವರೆಗೆ.

೩) ದೀರ್ಘಾಯುವೆಂದರೆ ೬೪ ವಯಸ್ಸಿನ ಮೇಲೆ ಬದುಕುವುದು.

ಜನನದಿಂದ ಎಂಟು ವರುಷಗಳ ವರೆಗಿನ ಕಾಲವು ಬಾಲಾರಿಷ್ಟಯೋಗದಲ್ಲಿ ಬರುವದರಿಂದ ಅದನ್ನು ಪ್ರತ್ಯೇಕವಾಗಿ ಇದರ ಮುಂದೆ ಕೊಡಲಾಗಿದೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ಷಷ್ಠ,

ಅಷ್ಟಮ ಈ ಸ್ಥಾನಾಧೀಶರು ಹಾಗೂ ಈ ಸ್ಥಾನಗಳು ಬಲಾಢ್ಯರಿದ್ದ ಜಾತಕನು ದೀರ್ಘಾಯುವಿರುತ್ತಾನೆ.

ಮೇಲೆ ಹೇಳಿದ ಈ ಮೂರೂ ಸ್ಥಾನಗಳು ದೂಷಿತವಿದ್ದು ಈ ಮೂರೂ ಸ್ಥಾನಾಧೀಶರು ನಿರ್ಬಲರಿದ್ದ ಜಾತಕನು ಅಲ್ಪಾಯುವಿರುತ್ತಾನೆ.

ಅಷ್ಟಮ ಸ್ಥಾನ, ಅಷ್ಟಮೇಶ ಬಲಾಢ್ಯರಿದ್ದು ಲಗ್ನ, ಷಷ್ಠ ಸ್ಥಾನಗಳು ಹಾಗೂ ಸ್ಥಾನಾಧೀಶರು ನಿರ್ಬಲ ಇಲ್ಲವೆ ದೂಷಿತರಿದ್ದರೆ ಮಧ್ಯಮಾಯು ವಿರುತ್ತಾರೆ.

**ಗ್ರಹ :** ಗ್ರಹಗಳ ದೃಷ್ಟಿಯಿಂದ ಪರಿಶೀಲಿಸಿದರೆ ಚಂದ್ರನು ನಿರ್ಬಲ ನಿರುವ ಜಾತಕನು ಅಲ್ಪಾಯುವಿರುವನು.

ರವಿ, ಚಂದ್ರ, ಶನಿ ಇವರು ಬಲಾಢ್ಯರಿರುವ ಜಾತಕನು ದೀರ್ಘಾಯು-ವಿರುತ್ತಾನೆ, ಚಂದ್ರನು ಬಲಾಢ್ಯನಿದ್ದು, ರವಿಯು. ನಿರ್ಬಲನಿರುವ ಜಾತಕನು ಮಧ್ಯಮಾಯುವಿರುತ್ತಾನೆ.

### ಯೋಗಗಳು

೧) ಲಗ್ನೇಶ, ಅಷ್ಟಮೇಶ, ಷಷ್ಠೇಶ ಹಾಗೂ ರವಿ-ಚಂದ್ರರು ಬಲಾಢ್ಯರಿದ್ದ ಜಾತಕನು ದೀರ್ಘಾಯುವಿರುತ್ತಾನೆ.

೨) ಅನೇಕ ಗ್ರಹಗಳು ಉಚ್ಚ ಸ್ವಕ್ಷೇತ್ರದಲ್ಲಿದ್ದ— ಅದರಲ್ಲಿಯೂ ರವಿ,ಚಂದ್ರ ಗುರು, ಶನಿ ಇವರು ಉಚ್ಚ ಸ್ವಕ್ಷೇತ್ರ ರಾಶಿಯಲ್ಲಿದ್ದ— ಜಾತಕನು ದೀರ್ಘಾಯುವಿರುತ್ತಾನೆ.

೩) ಅಷ್ಟಮಾಧಿಪತಿ ಸ್ವಕ್ಷೇತ್ರದಲ್ಲಿದ್ದ ಜಾತಕನು ದೀರ್ಘಾಯುವಿರುತ್ತಾನೆ.

೪) ಲಗ್ನಾಧಿಪತಿ ಕೇಂದ್ರದಲ್ಲಿದ್ದು ಅಷ್ಟಮಾಧಿಪತಿ ಲಗ್ನದಲ್ಲಿದ್ದು ಗುರು, ಶುಕ್ರರಿಂದ ನೋಡಲ್ಪಟ್ಟ ಜಾತಕನು ದೀರ್ಘಾಯುವಿರುತ್ತಾನೆ.

೫) ಲಗ್ನ, ಅಷ್ಟಮ, ದಶಮ, ನವಮ ಈ ಸ್ಥಾನಾಧೀಶರು ಬಲಾಢ್ಯರಿದ್ದ ಜಾತಕನು ದೀರ್ಘಾಯುವಿರುತ್ತಾನೆ.

೬) ಲಗ್ನೇಶನು ಚರರಾಶಿಯಲ್ಲಿದ್ದು, ಅಷ್ಟಮೇಶನು ಸ್ಥಿರರಾಶಿಯಲ್ಲಿದ್ದ ಜಾತಕನು ದೀರ್ಘಾಯುವಿರುತ್ತಾನೆ.

೭) ಲಗ್ನೇಶನು ಸ್ಥಿರರಾಶಿಯಲ್ಲಿದ್ದು, ಅಷ್ಟಮೇಶನು ದ್ವಿಸ್ವಭಾವ ರಾಶಿಯಲ್ಲಿದ್ದ ಜಾತಕನು ದೀರ್ಘಾಯುವಿರುತ್ತಾನೆ.

೮) ಲಗ್ನೇಶನು ದ್ವಿಸ್ವಭಾವ ರಾಶಿಯಲ್ಲಿದ್ದು, ಅಷ್ಟಮೇಶನು ಸ್ಥಿರ ರಾಶಿಯಲ್ಲಿದ್ದ ಜಾತಕನು ದೀರ್ಘಾಯುವಾಗಿರುತ್ತಾನೆ.

೯) ರವಿ ಹಾಗೂ ಲಗ್ನೇಶರು ನಿರ್ಬಲರಿದ್ದು, ಷಷ್ಠೇಶ ಅಷ್ಟಮೇಶ ಹಾಗೂ ಚಂದ್ರ ಬಲಾಢ್ಯರಿದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೦) ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೧) ಸುಖಸ್ಥಾನವು ದೂಷಿತವಿದ್ದು, ಸುಖೇಶನು ನಿರ್ಬಲನಿದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೨) ರವಿ–ಶನಿಯು ನಿರ್ಬಲರಿದ್ದು ಚಂದ್ರ, ಮಂಗಳ, ಬುಧರು ಬಲಾಢ್ಯರಿರುವ ಜಾತಕನು ಮಧ್ಯಮಾಯುವಿರುತ್ತಾನೆ.

೧೩) ಲಗ್ನಾಧಿಪತಿಯು ನಿರ್ಬಲನಿದ್ದು, ಗುರುವು ಕೇಂದ್ರ ತ್ರಿಕೋನದಲ್ಲಿದ್ದು, ೬, ೮, ೧೨ ಈ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೪) ಶುಭಗ್ರಹಗಳು ಕೇಂದ್ರ ತ್ರಿಕೋನದಲ್ಲಿದ್ದು ಪಾಪಗ್ರಹಗಳು ೬, ೮, ೧೨ನೆಯ ಸ್ಥಾನಗಳ ಜಾತಕನು ಮಧ್ಯಮಾಯುವಿರುತ್ತಾನೆ.

೧೫) ಲಗ್ನೇಶನು ಸ್ಥಿರರಾಶಿಯಲ್ಲಿಯೂ ಅಷ್ಟಮೇಶನು ಚರರಾಶಿಯಲ್ಲಿಯೂ ಇದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೬) ಲಗ್ನೇಶ ಹಾಗೂ ಅಷ್ಟಮೇಶ ಈರ್ವರೂ ದ್ವಿಸ್ವಭಾವ ರಾಶಿಯಲ್ಲಿದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೭) ಲಗ್ನೇಶ ಹಾಗೂ ಅಷ್ಟಮೇಶ ಈರ್ವರೂ ಚರರಾಶಿಯಲ್ಲಿದ್ದ ಜಾತಕನು ಮಧ್ಯಮಾಯುವಿರುತ್ತಾನೆ.

೧೮) ನಿರ್ಬಲ ಚಂದ್ರನು ಷಷ್ಠ, ಅಷ್ಟಮ, ವ್ಯಯ ಈ ಸ್ಥಾನ ದಲ್ಲಿದ್ದು, ಶನಿಯಿಂದ ನೋಡಲ್ಪಟ್ಟ ಜಾತಕನು ಅಲ್ಪಾಯುವಿರುತ್ತಾನೆ.

೧೯) ಚಂದ್ರ ಹಾಗೂ ಅಷ್ಟಮೇಶರು ನಿರ್ಬಲರಿದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೦) ಲಗ್ನೇಶ, ಷಷ್ಠೇಶ, ಅಷ್ಟಮೇಶ ನಿರ್ಬಲರಿದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೧) ಅನೇಕ ಗ್ರಹಗಳು ನೀಚ, ವಕ್ರೀ, ಅಸ್ತ, ಶತ್ರುಕ್ಷೇತ್ರಗಳಿದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೨) ಲಗ್ನೇಶ ದುರ್ಬಲನಾಗಿ ೬, ೮, ೧೨ ನೆಯ ಸ್ಥಾನಗಳಲ್ಲಿದ್ದು, ಶುಭಗ್ರಹಗಳ ದೃಷ್ಟಿರಹಿತನಿದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೩) ನಿರ್ಬಲ ಲಗ್ನೇಶನು ಸೂರ್ಯನಿಗೆ ಶತ್ರುವಿದ್ದರೆ ಅಲ್ಪಾಯು ವಿರುತ್ತಾನೆ.

೨೪) ಲಗ್ನೇಶನು ಚರರಾಶಿಯಲ್ಲಿಯೂ, ಅಷ್ಟಮೇಶನು ದ್ವಿಸ್ವಭಾವ ರಾಶಿಯಲ್ಲಿಯೂ ಇದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೫ ಲಗ್ನೇಶ ಹಾಗೂ ಅಷ್ಟಮೇಶರು ಸ್ಥಿರರಾಶಿಯಲ್ಲಿದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೬) ಲಗ್ನೇಶ ದ್ವಿಸ್ವಭಾವ ರಾಶಿಯಲ್ಲಿದ್ದು, ಅಷ್ಟಮೇಶ ಚರರಾಶಿ ಯಲ್ಲಿದ್ದ ಜಾತಕನು ಅಲ್ಪಾಯುವಿರುತ್ತಾನೆ.

೨೭) ಲಗ್ನಾಧಿಪತಿಯು ಬಲಾಢ್ಯನಿದ್ದರೆ ದೀರ್ಘಾಯು ಇರುತ್ತಾರೆ.

೨೮) ಲಗ್ನಾಧಿಪತಿಗಳಾದ ಗುರು, ಶುಕ್ರರು ಬಲಾಢ್ಯರಾಗಿ ಕೇಂದ್ರ ತ್ರಿಕೋನಲ್ಲಿದ್ದರೆ ಧೀರ್ಘಾಯುವಿರುತ್ತಾರೆ.

೨೯) ಕೇಂದ್ರ ತ್ರಿಕೋನದಲ್ಲಿ ಪಾಪಗ್ರಹ ಇಲ್ಲವೆ ಲಗ್ನಾಧಿಪತಿಯು ಚತುರ್ಥದಲ್ಲಿಯೂ ಬೃಹಸ್ಪತಿಯು ಅಷ್ಟಮದಲ್ಲಿ ಬಲಾಢ್ಯನಾಗಿದ್ದರೆ ದೀರ್ಘಾ ಯುವಾಗಿರುತ್ತಾರೆ.

೩೦) ಲಗ್ನಾಧಿಪತಿಯು ನಿರ್ಬಲನಾಗಿ ಅಷ್ಟಮ, ವ್ಯಯ, ಷಷ್ಠದಲ್ಲಿದ್ದರೆ ಸದಾ ರೋಗಪೀಡಿತರಿರುತ್ತಾರೆ.

## ದುರ್ಮರಣ

ದುರ್ಮರಣವು ಆಯುರ್ಮಾನಕ್ಕೆ ಸಂಬಂಧಿಸಿದ ಯೋಗವಿರುವದರಿಂದ ಅದನ್ನು ಈ ಪ್ರಕರಣದಲ್ಲಿಯೇ ವಿವೇಚಿಸಲಾಗಿದೆ.

**ದುರ್ಮರಣದ ಪ್ರಕಾರಗಳು** ದುರ್ಮರಣದಲ್ಲಿ ಎರಡು ಪ್ರಕಾರಗಳಿವೆ. ೧) ಅಪಘಾತ, ೨) ಆತ್ಮಹತ್ಯೆ.

ನಾವೆ, ಹಡಗು, ಬೋಟು, ಡೋಣಿ ಮೊದಲಾದವುಗಳು ಮುಳುಗಿ ದುರಂತಕ್ಕೀಡಾಗುವದು, ಮೋಟಾರ್-ಸೈಕಲ್, ಕಾರ್, ಟ್ರಕ್, ಸ್ಕೈಕಲ್, ವಿಮಾನ ಮೊದಲಾದ ವಾಹನಗಳಿಂದ ಅಪಘಾತಕ್ಕೀಡಾಗುವದು, ಗಣಿ-ಕಾರಖಾನೆಗಳಲ್ಲಿ ಯಂತ್ರಗಳ ಸ್ಫೋಟದಿಂದಾಗಲಿ ಇಲ್ಲವೆ ವಿದ್ಯುತ್ತಿನ ಉಪಕರಣಗಳಿಂದಾಗಲೀ ಅಪಘಾತವನ್ನು ಹೊಂದುವದು, ಬೆಂಕಿಯ ಅನಾಹುತ ಇಲ್ಲವೆ ಗೋಡೆಗಳು ಕುಸಿದು ಬೀಳುವಿಕೆ, ಮೇಲಿನಿಂದ ಬೀಳುವಿಕೆ ಈ ಮೊದಲಾದ ದುರಂತಗಳಿಂದ ದುರ್ಮರಣ ಹೊಂದುವದಕ್ಕೆ "ಅಪಘಾತ" ಎನ್ನುವರು.

ಉರುಲು ಹಾಕೊಳ್ಳುವದಾಗಲಿ ವಿಷ, ತಗಣೆ ಪುಡಿ, ನಿದ್ದೆಗುಳಿಗೆ ಮೊದಲಾದವುಗಳನ್ನು ಸೇವಿಸಿಯಾಗಲಿ ಕೆರೆ-ಭಾವಿಗಳಿಗೆ ಬೀಳುವದರಿಂದಾಗಲಿ ರೈಲು, ಮೋಟರ್ ಮೊದಲಾದ ವಾಹನಗಳ ಕೆಳಗೆ ಬೀಳುವದೇ ಆಗಲಿ, ಬೆಂಕಿಯನ್ನು ಹಚ್ಚಿಕೊಂಡು ಸಾಯುವದಾಗಲಿ ಇವೇ ಮೊದಲಾದ ರೀತಿಯಿಂದ ಆತ್ಮಹತ್ಯೆಯಿಂದ ದುರ್ಮರಣಕ್ಕೀಡಾಗುವುದು ಎರಡನೆಯ ವರ್ಗವು. ಹೀಗೆ ದುರ್ಮರಣಗಳನ್ನು ೨ ವರ್ಗಗಳಾಗಿ ವಿಂಗಡಿಸಬಹುದು. ಯಾವುದೇ ರೀತಿಯಿಂದ ದುರ್ಮರಣ ಹೊಂದಲಿಕ್ಕೆ ಜಾತಕದಲ್ಲಿ ದುರ್ಮರಣಕಾರಕ ಅಶುಭಯೋಗವಿಲ್ಲದೆ ಯಾರೂ ದುರ್ಮರಣ ಹೊಂದಲಾರರು. ಆದುದರಿಂದ ಫಲಜ್ಯೋತಿಷದಲ್ಲಿ ಇಂತಹ ಅಶುಭ, ಅರಿಷ್ಟಕರ, ಅನಪೇಕ್ಷಿತ ಆಗಂತುಕ (univited) ವಿಷಯವಾಗಿ ಜ್ಯೋತಿಷ್ಯದ ಭಾಷ್ಯ ಏನು, ಕಾರಕ ಗ್ರಹ, ಲಗ್ನ, ರಾಶಿ ಸ್ಥಾನಾದಿಗಳಾವವು ಎಂಬುದನ್ನು ನೋಡುವಾ.

**ಕಾರಕಗ್ರಹ:—** ಯಾವದೇ ಪ್ರಕಾರದ ಅಪಘಾತಗಳಿಂದ ದುರ್ಮ-ರಣ ಹೊಂದುವದರ ಕಾರಕ ಗ್ರಹವೆಂದರೆ ಮಂಗಳನು. ಮಂಗಳನು ದೂಷಿತ ನಿರದೆ ಯಾರೂ ಅಪಘಾತಾದಿಗಳನ್ನು ಹೊಂದಲಾರರು. ಅದರಲ್ಲಿಯೂ ಮಂಗಳ-ಶನಿ ಇವರ ಯುತಿಯೋಗವಾಗಲಿ. ಪ್ರತಿಯೋಗವಾಗಲಿ ದೃಷ್ಟಿ ಯೋಗವಾಗಲಿ ಮೊದಲಾದ ಅಶುಭಯೋಗಗಳಿದ್ದರೆ ಆಕಸ್ಮಿಕ ಅಪಘಾತ ಗಳು ನಿಶ್ಚಿತ. ಮಂಗಳನ ತರುವಾಯ ರಾಹುಗ್ರಹವು ಕೂಡ ಅಪಘಾತ ಕಾರಕವಾಗಿದೆ. ರವಿಯು ದೂಷಿತನಿದ್ದರೆ ಕೊಲೆ, ಫಾಸಿ, ಜೇಲು, ರಾಜ ಕೀಯ ಪಕ್ಷಗಳ, ರಾಜಕೀಯ ಜನರಿಂದ ಇಲ್ಲವೆ ಸ್ವಜನರಿಂದ ದುರ್ಮರಣ ಹೊಂದುವನು.

ಯಾವದೇ ಪ್ರಕಾರದ ಆತ್ಮಹತ್ಯೆಯಿಂದ ದುರ್ಮರಣವನ್ನು ತರುವ ಕಾರಕಗ್ರಹವೆಂದರೆ ಚಂದ್ರನು. ಏಕೆಂದರೆ ಚಂದ್ರನು ಮನಸ್ಸಿನ ಕಾರಕನು. ಮನಸ್ಸು ದುರ್ಬಲ, ಅಸ್ಥಿರ, ಚಂಚಲವಾಗದೆ ಆತ್ಮಹತ್ಯೆಯಾಗಲಾರದು. ಆದುದರಿಂದ ಚಂದ್ರನೇ ಆತ್ಮಹತ್ಯೆಯ ಕಾರಕಗ್ರಹವಿದ್ದು, ಚಂದ್ರ ದೂಷಿತ ನಿರದೆ ಯಾರೂ ಆತ್ಮಹತ್ಯೆ ಮಾಡಿಕೊಳ್ಳಲಾರರು. ಚಂದ್ರನ ತರುವಾಯ ಬುಧನೂ ಕೆಲಮಟ್ಟಿಗೆ ಕಾರಕನು.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಮೂರು ಸ್ಥಾನ ಗಳನ್ನು ಪರಿಶೀಲಿಸಬೇಕು. ಅಷ್ಟಮ ಸ್ಥಾನವಿದು ಮೃತ್ಯುವಿನ ಸ್ಥಾನವಿರು ತ್ತದೆ. ಮರಣ ಹೇಗಾಗುತ್ತದೆ ಎಂಬುದನ್ನು ಅರಿತುಕೊಳ್ಳಲು ಅಷ್ಟಮ ಸ್ಥಾನ, ಅಷ್ಟಮೇಶರನ್ನು ಪರಿಶೀಲಿಸಬೇಕು. ಎರಡನೆಯದಾಗಿ ಹೃದಯ — ಫುಪ್ಫುಸಗಳ ಸ್ಥಾನವಾಗಿ ಚತುರ್ಥಸ್ಥಾನವು ಆಕಸ್ಮಿಕ ಅಪಘಾತದಿಂದ ದುರ್ಮರಣವನ್ನು ತರುವ ಸ್ಥಾನವಿರುತ್ತದೆ. ಆದುದರಿಂದ ಚತುರ್ಥ ಸ್ಥಾನ, ಚತುರ್ಥೇಶನ ಬಲಾಬಲವನ್ನು ಪರಿಶೀಲಿಸಬೇಕು. ಇದಲ್ಲದೆ ದಶಮಸ್ಥಾನ ದಲ್ಲಿರುವ ಗ್ರಹಗಳ ಪರಿಣಾಮವು ಸಹ ಚತುರ್ಥಸ್ಥಾನದ ಮೇಲಾಗುವದ ರಿಂದ ದಶಮದಲ್ಲಿ ಪಾಪಗ್ರಹಗಳಿದ್ದರೆ ಆ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು.

ಆತ್ಮಹತ್ಯೆಯಂಥ ದುರ್ಮರಣ ತರುವ ಅಶುಭಯೋಗಗಳಿಗಾಗಿ ಜಾತ ಕನ ಸ್ವಭಾವ-ಗುಣಧರ್ಮಗಳ ಸ್ಥಾನವೂ ಮಸ್ತಿಷ್ಕ-ಶಿರಗಳ ಸ್ಥಾನವೂ ಆದ

ತನುಸ್ಥಾನವನ್ನು ಲಗ್ನೇಶನನ್ನು ಪರಿಶೀಲಿಸಬೇಕು. ಆದುದರಿಂದ ಅಷ್ಟಮ ಸ್ಥಾನ, ಚತುರ್ಥಸ್ಥಾನ, ತನುಸ್ಥಾನ ಮತ್ತು ಲಗ್ನೇಶ, ಚತುರ್ಥೇಶ, ಅಷ್ಟಮೇಶ ಇವುಗಳ ಮೇಲಿಂದ ದುರ್ಮರಣದ ಯೋಗಗಳನ್ನು ಪರಿಶೀಲಿಸ ಬೇಕು.

ಲಗ್ನ:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟವಾದ ಲಗ್ನದವರೇ ದುರ್ಮರಣ ಹೊಂದುವರೆಂದು ಹೇಳಲು ಬಾರದು. ಆದರೂ ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿ ದುರ್ಮರಣ ಹೊಂದುವದನ್ನು ಕಾಣುತ್ತೇವೆ.

ರಾಶಿ:— ನಿರ್ದಿಷ್ಟ ರಾಶಿಯವರೆ ದುರ್ಮರಣ ಹೊಂದುವರೆಂದು ಹೇಳಲು ಬಾರದು.

## ದುರ್ಮರಣಕಾರಕ ಯೋಗಗಳು

೧) ರವಿ, ಮಂಗಳ, ಶನಿ, ರಾಹು ಈ ನಾಲ್ಕು ಗ್ರಹಗಳ ಯುತಿ ಯೋಗವು ಲಗ್ನ, ಚತುರ್ಥ, ದಶಮ ಈ ಸ್ಥಾನಗಳಿದ್ದರೆ,

೨) ಶನಿ-ಮಂಗಳ, ರವಿ-ಶನಿ, ಶನಿ-ರಾಹು, ರಾಹು-ಮಂಗಳ, ಈ ಗ್ರಹಗಳ ಪ್ರತಿಯೋಗವು ಲಗ್ನ-ಸಪ್ತಮ, ಚತುರ್ಥ-ದಶಮ, ದ್ವಿತೀಯ-ಅಷ್ಟಮ, ಷಷ್ಠ-ವ್ಯಯ ಈ ಸ್ಥಾನಗಳಲ್ಲಿದ್ದರೆ,

೩) ಶನಿ-ಚಂದ್ರ, ರಾಹು-ಚಂದ್ರ, ಬುಧ-ಮಂಗಳ, ಬುಧ-ಚಂದ್ರ ಈ ಗ್ರಹಗಳ ಯುತಿಯೋಗವು ಲಗ್ನ, ಚತುರ್ಥ, ವ್ಯಯ, ಅಷ್ಟಮ ಈ ಸ್ಥಾನದಲ್ಲಿದ್ದರೆ,

೪) ರವಿ, ಮಂಗಳ ಇವರ ಯುತಿಯೋಗವು ಲಗ್ನ, ಚತುರ್ಥ, ವ್ಯಯ, ಅಷ್ಟಮ ಈ ಸ್ಥಾನಗಳಲ್ಲಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟರೆ,

೫) ರಾಹು, ಮಂಗಳ ಇವರ ಯುತಿಯೋಗವು ಲಗ್ನ, ಚತುರ್ಥ, ವ್ಯಯ, ಅಷ್ಟಮ ಈ ಸ್ಥಾನಗಳಲ್ಲಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟರೆ,

೬) ಜಾತಕದಲ್ಲಿ ಚಂದ್ರನು ದುರ್ಬಲನಾಗಿ ಲಗ್ನ, ಚತುರ್ಥ, ಷಷ್ಠ, ಅಷ್ಟಮ, ವ್ಯಯದಲ್ಲಿದ್ದು ಅನೇಕ ಗ್ರಹಗಳಿಂದ ದೃಷ್ಟಿಸಲ್ಪಟ್ಟಿದ್ದರೆ,

೭) ಅನೇಕ ಗ್ರಹಗಳು ಸ್ತ್ರೀರಾಶಿಯವವಾಗಿ ಲಗ್ನವು, ದ್ವಾದಶ, ಷಷ್ಠ ದಲ್ಲಿದ್ದರೆ,

೮) ಲಗ್ನೇಶ, ಅಷ್ಟಮೇಶ, ಚಂದ್ರ ಈ ಮೂರೂ ಗ್ರಹಗಳು ದೂಷಿತವಿದ್ದರೆ,

೯) ಸ್ತ್ರೀರಾಶಿಯು ಲಗ್ನದಲ್ಲಿದ್ದು ಲಗ್ನೇಶ ಹಾಗೂ ಚಂದ್ರರು ದೂಷಿತರಿದ್ದರೆ,

೧೦) ಪುರುಷ ಗ್ರಹಗಳು ಸ್ತ್ರೀರಾಶಿಯವವಾಗಿ, ಸ್ತ್ರೀಗ್ರಹಗಳು ಪುರುಷರಾಶಿಯವಾಗಿಯೂ ಇದ್ದು ಲಗ್ನ, ಚತುರ್ಥ, ಅಷ್ಟಮ, ವ್ಯಯ ಈ ಸ್ಥಾನಗಳಿದ್ದರೆ,

೧೧) ರವಿ-ಕುಜರು ಲಗ್ನ, ಚತುರ್ಥ, ಅಷ್ಟಮ, ದ್ವಾದಶದಲ್ಲಿದ್ದು ಶನಿಯಿಂದ ದೃಷ್ಟಿಸಲ್ಪಟ್ಟಿದ್ದರೆ, ಗುಂಡು ಒಡಿದು ಗುಂಡಿನೇಟಿನಿಂದ ದುರ್ಮರಣ ವಾಗುತ್ತದೆ.

೧೨) ಚಂದ್ರನು ಚತುರ್ಥದಲ್ಲಿಯೂ, ಕುಜನು ಸಪ್ತಮದಲ್ಲಿಯೂ, ಶನಿಯು ದಶಮದಲ್ಲಿಯೂ ಇದ್ದರೆ ಕೆರೆ, ಭಾವಿ, ನದಿಗಳಿಂದ ದುರ್ಮರಣ ವಾಗುತ್ತದೆ.

೧೩) ಚಂದ್ರ-ರವಿಯರು ಕನ್ಯಾರಾಶಿಯಲ್ಲಿದ್ದು, ಪಾಪಗ್ರಹಗಳಾದ ಶನಿ-ಮಂಗಳರ ಸಮಸಪ್ತಕವು ಲಗ್ನ-ಸಪ್ತಮ, ದ್ವಿತೀಯ-ಅಷ್ಟಮ, ಷಷ್ಠ-ದ್ವಾದಶದಲ್ಲಿದ್ದರೆ ಸ್ವಜನರಿಂದ ದುರ್ಮರಣವಾಗುತ್ತದೆ.

೧೪) ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು, ಮೀನ ಈ ರಾಶಿಯ ಲಗ್ನಗಳಿದ್ದು, ಲಗ್ನದಲ್ಲಿ ರವಿ, ಚಂದ್ರ, ಶನಿ ಈ ತ್ರಿಗ್ರಹಗಳ ಯುತಿಯೋಗವಿದ್ದರೆ ನದಿಯ ಪ್ರವಾಹದಿಂದ ದುರ್ಮರಣವಾಗುವದು, ಅಥವಾ ನೀರಿನಲ್ಲಿ ಮುಳುಗಿ ದುರ್ಮರಣವಾಗುವದು.

೧೫) ಶನಿಯು ಕರ್ಕ ರಾಶಿಯವನಾಗಿಯೂ, ಚಂದ್ರನು ಮಕರ ರಾಶಿಯವನಾಗಿಯೂ ಇದ್ದು, ಲಗ್ನ - ಸಪ್ತಮ, ಚತುರ್ಥ - ದಶಮ,

ದ್ವಿತೀಯ–ಅಷ್ಟಮ, ವ್ಯಯ–ಷಷ್ಠದಲ್ಲಿ ಸಮಸಪ್ತಕ ಯೋಗವಿದ್ದರೆ ಹೊಟ್ಟೆಯಲ್ಲಿ ನೀರಿನ ಗಡ್ಡೆಯಾಗಿ ದುರ್ಮರಣ ಹೊಂದುವನು.

೧೬) ಕನ್ಯಾರಾಶಿಯ ಚಂದ್ರನು ಸಿಂಹರಾಶಿಯ ಶನಿಯು ತುಲಾರಾಶಿಯ ರವಿ ಇಲ್ಲವೆ ಮಂಗಳನಿದ್ದರೆ ರಾಜಯಕ್ಷ್ಮ ಮೊದಲಾದ ದೀರ್ಘಾವಧಿ ರೋಗಗಳಿಂದ ಮರಣ ಹೊಂದುವನು.

೧೭) ಕನ್ಯಾ ಇಲ್ಲವೆ ವೃಶ್ಚಿಕದಲ್ಲಿ ಶನಿಯು ೧೯ ಅಂಶ, ಚಂದ್ರನು ೨೦ ಅಂಶ, ಮಂಗಳ ಇಲ್ಲವೆ ರವಿ ೨೧ ಅಂಶಗಳ ತ್ರಿಗ್ರಹಯುತಿಯೋಗವು ಷಷ್ಠ, ಅಷ್ಟಮ, ವ್ಯಯ, ಲಗ್ನದಲ್ಲಿದ್ದರೆ ದುರ್ಮರಣ ಹೊಂದುವನು.

೧೮) ಚಂದ್ರನು ಮಕರ ಇಲ್ಲವೆ ಕುಂಭರಾಶಿಯವನಿದ್ದು ರವಿ, ಶನಿ, ಮಂಗಳರ ಮಧ್ಯದಲ್ಲಿದ್ದು ಚತುರ್ಥ, ಷಷ್ಠ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ನೇಣು ಹಾಕಿಕೊಂಡಾಗಲಿ, ಸ್ಟೋವ್ ಮೊದಲಾದ ಬೆಂಕಿಯ ಅನಾಹುತಗಳಿಂದಾಗಲಿ ದುರ್ಮರಣ ಹೊಂದುವನು.

**ಮರಣ ಹೇಗಾಗುವದು?** ಅಷ್ಟಮ ಸ್ಥಾನದಲ್ಲಿರುವ ಗ್ರಹಗಳ ಮೇಲಿಂದ ಅಥವಾ ಅಷ್ಟಮೇಶನ ಮೇಲಿಂದ ಮರಣವು ಹೇಗಾಗುತ್ತದೆಂಬುದನ್ನು ತಿಳಿಯಲು ಬರುತ್ತದೆ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ:—

೧) ರವಿಯು ಅಷ್ಟಮದಲ್ಲಿದ್ದರೆ ಅಗ್ನಿ ಮೂಲವಾಗಿ

೨) ಚಂದ್ರನು ಅಷ್ಟಮದಲ್ಲಿದ್ದರೆ ಉದರಾದಿ ಕಾರಣದಿಂದಾಗಲಿ, ನೀರಿನಿಂದಾಗಲಿ

೩) ಕುಜನು ಅಷ್ಟಮದಲ್ಲಿದ್ದರೆ ಆಯುಧದಿಂದಾಗಲಿ, ಅಪಘಾತದಿಂದಾಗಲಿ,

೪) ಬುಧನು ಅಷ್ಟಮದಲ್ಲಿದ್ದರೆ; ಜ್ವರದಿಂದ

೫) ಗುರುವು ಅಷ್ಟಮದಲ್ಲಿದ್ದರೆ ರೋಗ ತಿಳಿಯದೆ

೬) ಶುಕ್ರನು ಅಷ್ಟಮದಲ್ಲಿದ್ದರೆ ಬಾಯಾರಿಕೆಯಿಂದ

೭) ಶನಿಯು ಅಷ್ಟಮದಲ್ಲಿದ್ದರೆ ಉಪವಾಸದಿಂದಾಗಲಿ, ಹಸಿವೆ ಯಿಂದಾಗಲಿ ಮರಣಹೊಂದುವನು.

## ಬಾಲಾರಿಷ್ಟಯೋಗ

ಯಾವುದೇ ಕೂಸಿನ ಜಾತಕವನ್ನು ಕೈಯಲ್ಲಿ ತೆಗೆದುಕೊಂಡ ಕೂಡಲೆ ಬಾಲಾರಿಷ್ಟಯೋಗವಿದೆಯೆ ಹೇಗೆ ಎಂಬುದನ್ನು ಮೊದಲು ಪರಿಶೀಲಿಸ ಬೇಕಾಗುತ್ತದೆ. ಅಂತೆಯೇ ನಮ್ಮ ಪುರಾತನ ಜ್ಯೋತಿಷಿಗಳು ಜಾತಕನು ನಾಲ್ಕು ವರ್ಷದವನಾಗುವವರೆಗೆ ಜಾತಕವನ್ನು ತಯಾರಿಸುತ್ತಿದ್ದಿಲ್ಲ, ಹಾಗೂ ಪರಿಶೀಲಿಸುತ್ತಿದ್ದಿಲ್ಲ. ಇದಕ್ಕೆ ಅವರು ಕೊಡುತ್ತಿರುವ ಕಾರಣವೆಂದರೆ, ಕೂಸಿನ ಆಯುಷ್ಯವು ನಾಲ್ಕು ವರ್ಷದ ವರೆಗೆ ಮಾತೃವಿನ ಗ್ರಹಗತಿಯನ್ನು ಅವಲಂಬಿಸಿರುತ್ತದೆ ಎಂಬುದೇ ಆವರ ಅಭಿಪ್ರಾಯ ಅಥವಾ ಗ್ರಹಿಕೆ ಇರು ತ್ತದೆ. ಆದರೆ ಅವರ ಈ ಅಭಿಪ್ರಾಯವನ್ನು ನಾವು ಒಪ್ಪುವದಿಲ್ಲ. ಏಕೆಂದರೆ ಕೂಸು ಜನಿಸಿದ ಕೆಲವು ಕ್ಷಣದಲ್ಲಿಯೇ ಮಾತೃ ಅಸುವು ನೀಗಿದರೂ ಕೂಸು ಗಳು ಬೆಳೆದು ದೊಡ್ಡವರಾದ ಅನೇಕ ಜಾತಕಗಳನ್ನು ನೋಡಿದ ಅನುಭವ ಇದೆ. ಆದುದರಿಂದ ಕೂಸಿನ ಜನ್ಮಪತ್ರಿಕೆಯ ಗ್ರಹಗತಿಗಳನ್ನು ಸ್ವತಂತ್ರ ವಾಗಿ ಪರಿಶೀಲಿಸಿ ಆಯುರ್ಮಾನ ಮತ್ತು ಬಾಲಾರಿಷ್ಟಯೋಗವನ್ನು ಸೂಕ್ಷ್ಮ ವಾಗಿ ಪರಿಶೀಲಿಸಬೇಕು.

**ಕಾರಕಗ್ರಹ ಸ್ಥಾನಗಳು** — ಹೇಗೆ ತ್ರಿದೋಷಗಳು ಕುಪಿತವಾಗದೆ ಮರಣ ಬರುವದಿಲ್ಲವೋ ಹಾಗೆಯೇ ಚಂದ್ರನು ದುರ್ಬಲ ಹಾಗೂ ದೂಷಿತ ನಿರದೆ ಬಾಲಾರಿಷ್ಟಯೋಗ ಉಂಟಾಗಲಾರದು. ಇದರಂತೆಯೇ ಅಷ್ಟಮ ಸ್ಥಾನ, ಅಷ್ಟಮೇಶರು ದುರ್ಬಲ ಹಾಗೂ ದೂಷಿತರಿರದೆ ಬಾಲಾರಿಷ್ಟಯೋಗ ಉಂಟಾಗಲಾರದು.

**ಕೆಲವು ಬಾಲಾರಿಷ್ಟಯೋಗಗಳು :—**

೧) ಲಗ್ನ, ಲಗ್ನೇಶ, ಅಷ್ಟಮ, ಅಷ್ಟಮೇಶ, ಷಷ್ಠ, ಷಷ್ಠೇಶ, ಚಂದ್ರ ಈ ಏಳು ದೂಷಿತವಿದ್ದರೆ,

೨) ಅನೇಕ ಗ್ರಹಗಳು ಲಗ್ನ, ಷಷ್ಠ, ಅಷ್ಟಮ, ವ್ಯಯದಲ್ಲಿದ್ದರೆ (ಪಂಚಗ್ರಹ, ಷಡ್ಗ್ರಹ ಸಪ್ತಗ್ರಹ ಅಷ್ಟಗ್ರಹ ಯೋಗಗಳಿದ್ದರೆ)

೩) ಚಂದ್ರನು ದುರ್ಬಲನಾಗಿ, ಷಷ್ಠ, ಅಷ್ಟಮ, ವ್ಯಯದಲ್ಲಿದ್ದು, ರವಿ, ರಾಹು, ಮಂಗಳ, ಶನಿಯಿಂದ ದೃಷ್ಟಿಸಲ್ಪಟ್ಟಿದ್ದರೆ,

೪) ಸ್ತ್ರೀರಾಶಿಯ ಲಗ್ನವಿದ್ದು ಲಗ್ನೇಶನು ದುರ್ಬಲನಿದ್ದರೆ,

೫) ಪಾಪಗ್ರಹಗಳು ಲಗ್ನದಲ್ಲಿದ್ದು ಅಷ್ಟಮೇಶನು ದೂಷಿತನಿದ್ದರೆ,

೬) ಚಂದ್ರ ಹಾಗೂ ಷಷ್ಠೇಶ ಅಷ್ಟಮದಲ್ಲಿದ್ದು ಅಷ್ಟಮೇಶ ದೂಷಿತನಿದ್ದರೆ,

೭) ರವಿ–ಶನಿ, ಶನಿ–ಮಂಗಳ, ಚಂದ್ರ–ಶನಿ ಇವರ ಯುತಿಯೋಗವು ಅಷ್ಟಮದಲ್ಲಿದ್ದು, ಅಷ್ಟಮೇಶ ಹಾಗೂ ಚಂದ್ರ ದೂಷಿತನಿದ್ದರೆ,

೮) ಅನೇಕ ಪಾಪಗ್ರಹಗಳ ಮಧ್ಯದಲ್ಲಿ ಚಂದ್ರನು ಕೇಂದ್ರದಲ್ಲಿದ್ದರೆ,

ಈ ಮೇಲ್ಕಂಡ ಯೋಗಗಳಲ್ಲಿ ಜನಿಸಿದ ಶಿಶುವಿಗೆ ಬಾಲಾರಿಷ್ಟಯೋಗ ವುಂಟಾಗುತ್ತದೆ.



# ೪

# ರೋಗಗಳ ವಿಚಾರ

ಆಯುಷ್ಯ ಬಲವಾಗಿದ್ದರೆ ಯಾವ ರೋಗವಾದರೂ ನಿವಾರಣೆಯಾದೀತು ಎಂಬುದೇ ಜ್ಯೋತಿಷ್ಯಶಾಸ್ತ್ರದ ನಂಬಿಕೆ. ಕೆಲವರು ಯಾವದೊಂದು ರೋಗದಿಂದ ಮತ್ತೆಮತ್ತೆ ಬಳಲುವದನು ನೋಡಿದ್ದೇವೆ. ಕೆಲವರಿಗೆ ಯಾವುದೊಂದು ರೋಗವು ಜನ್ಮದಲ್ಲಿಯೇ ಬಾರದಂಥ ಉದಾಹರಣಗಳನ್ನೂ ನೋಡಿದ್ದೇವೆ. ಉದಾಹರಣಕ್ಕಾಗಿ "ಟಾಯ್‌ಫಾಯಿಡ್" ರೋಗ ಯಾರೊಬ್ಬರಿಗೆ ಜೀವನದಲ್ಲಿ ಅನೇಕ ಬಾರಿ ಬಂದದ್ದು ನೋಡಿದರೆ ಜೀವನದಲ್ಲಿ ಒಮ್ಮೆಯೂ ಟಾಯ್‌ಫಾಯಿಡ್ ಬರದೇ ಇದ್ದ ಉದಾಹರಣೆ ಗಳನ್ನೂ ನೋಡಿದ್ದೇವೆ ಅಂತೆಯೇ ಎಲ್ಲ ರೋಗಗಳು ಎಲ್ಲರಿಗೂ ಬರ ವದಿಲ್ಲವೆಂದು ಜ್ಯೋತಿಷ್ಯಶಾಸ್ತ್ರದ ಪ್ರತಿಪಾದನೆ. ಇದಕ್ಕೆ ಜ್ಯೋತಿಷ್ಯಶಾಸ್ತ್ರದ ವಿಶ್ಲೇಷಣೆಯೇ ಬೇರೆ. ಯಾವುದೇ ಜಾತಕನ ಜಾತಕದ ಪರಿಶೀಲನೆಯಿಂದ ಅವನಿಗೆ ಯಾವ ರೋಗ ಬರ ಬಹುದು, ಯಾವ ರೋಗದ ಪೀಡೆ ಬರುವದಿಲ್ಲ ಎಂಬುದನ್ನು ಹೇಳುವದು ಸಾಧ್ಯವಿದೆ. ಭಿನ್ನಭಿನ್ನ ರೋಗಗಳಿಗೆ ಭಿನ್ನಭಿನ್ನ ಗ್ರಹಗಳು ಭಿನ್ನಭಿನ್ನ ಸ್ಥಾನಗಳು, ಭಿನ್ನಭಿನ್ನ ಲಗ್ನ ಗಳು, ಭಿನ್ನಭಿನ್ನ ರಾಶಿಗಳು ಮತ್ತು ಯೋಗಗಳು ಕಾರಕ, ಪೂರಕವಿರುತ್ತವೆ. ಇವುಗಳ ವಿಶ್ಲೇಷಣೆಯನ್ನೇ ಈ ಪ್ರಕರಣದಲ್ಲಿ ಕೊಡಲಾಗಿದೆ.

## ೧. ಬಾಲಗ್ರಹ
## (Infantile Convulsions)

ಚಿಕ್ಕಮಕ್ಕಳಿಗೆ ಬರುವ ಬೇನೆಗಳು ಅನೇಕವಿದ್ದರೂ ಕೂಡ ಬಾಲ ಗ್ರಹಕ್ಕೇ "ಮಕ್ಕಳ ಬೇನೆ" ಎಂದು ರೂಢಿಯಲ್ಲಿ ಕರೆಯುವ ಪರಿಪಾಠವು ಬದ್ದಿದೆ. ಮೊಲೆ ಉಣ್ಣುವ ಮಕ್ಕಳಿಗೆ ವಿಶೇಷವಾಗಿ ಈ ಬೇನೆ ಬರುತ್ತದೆ. ಕ್ವಚಿತ್ತಾಗಿ ೪-೫ ವಯಸ್ಸಿನ ಮಕ್ಕಳಲ್ಲಿಯೂ ಈ ರೋಗದ ಉಪದ್ರವವಿರು ವದು ಕಂಡುಬಂದಿದೆ.

**ಕಾರಕಗ್ರಹ :**— ಈ ರೋಗದಲ್ಲಿ ಮಕ್ಕಳು ಒಮ್ಮಿಂದೊಮ್ಮೆ ಸೆಟೆಯು ತ್ತವೆ, ಹಾರಿಬೀಳುತ್ತವೆ, ಕೂಗಿಕೊಳ್ಳುತ್ತವೆ, ಕಣ್ಣು ಬೆಳ್ಳಗೆ ಮಾಡಿ ಕೈ

ಕಾಲುಗಳನ್ನು ಮಣಿಸಹತ್ತುತ್ತವೆ, ಕೈಮುಷ್ಟಿ ಬಿಗಿಹಿಡಿದು ನಡುಗಿಸುತ್ತವೆ, ನಡುಗುತ್ತವೆ. ಇವೇ ಮೊದಲಾದ ಲಕ್ಷಣ ಹಾಗೂ ಬಾಧೆಗಳಿರುವದರ ಮೂಲಕ ವಾತದೋಷವೇ ಪ್ರಧಾನವಿರುವವರಿಂದ ಶನಿಯೇ ಈ ರೋಗದ ಕಾರಕನು.

ಶನಿಯ ತರುವಾಯ ಚಂದ್ರನೂ ಈ ರೋಗದ ಕಾರಕನು. ಏಕೆಂದರೆ ಮಕ್ಕಳ ಎಲ್ಲ ಬೇನೆಗಳಿಗೂ ಚಂದ್ರನೇ ಕಾರಕನಿರುವನು. ಚಂದ್ರನು ಬಲಾಢ್ಯನಿರುವ ಜಾತಕವುಳ್ಳ ಮಕ್ಕಳಿಗೆ ಮಕ್ಕಳ ಬೇನೆ ಬರುವದೇ ಅಸಾಧ್ಯ.

**ಕಾರಕಸ್ಥಾನ** :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ "ತನು-ಸ್ಥಾನ"ವೇ ಈ ರೋಗದ ಕಾರಕವು. ಏಕೆಂದರೆ ನಾಜೂಕ ಪ್ರವೃತ್ತಿಯ ಮಕ್ಕಳಲ್ಲಿಯೂ ಈ ರೋಗ ಹೆಚ್ಚಾಗಿರುವದಲ್ಲದೆ ಮಜ್ಜಾಸಂಸ್ಥೆ, ನರಸಂಸ್ಥೆಗಳು ದುರ್ಬಲವಿರುತ್ತವೆ. ಅದರಲ್ಲಿಯೂ ವಾತವಾಹಿನಿಗಳು ದೂಷಿತವಿರುವದರಿಂದ ಶರೀರದಲ್ಲಿಯ ಸ್ನಾಯುಗಳು ಕುಣಿಯುತ್ತವೆ. ಈ ಎಲ್ಲ ಅಂಶಗಳು ಜಾತಕದ ತನುಸ್ಥಾನದಿಂದ ತಿಳಿಯುತ್ತವೆ. ತನುಸ್ಥಾನ ಹಾಗೂ ಲಗ್ನೇಶ ಬಲಾಢ್ಯವಿರುವ ಮಕ್ಕಳಿಗೆ ಈ ರೋಗ ಬರುವದೇ ಅಸಂಭವವಿರುತ್ತದೆ.

**ಲಗ್ನ** :— ಶಿರೆ, ಧಮನಿ, ಸ್ನಾಯುಗಳ ಮೇಲೆ ಧನುರಾಶಿಯ ಪ್ರಭಾವವಿರುತ್ತದೆ. ಆದುದರಿಂದ ಜಾತಕದಲ್ಲಿ (ಕುಂಡಲಿಯಲ್ಲಿ) ಧನುರಾಶಿಯು ದೂಷಿತವಿರದೆ ಬಾಲಗ್ರಹ ಬರಲಾರದು. ಆದುದರಿಂದ ವೃಷಭ, ಕರ್ಕ, ಮಿಥುನ, ಧನು, ಮಕರ ಈ ಲಗ್ನದವರೇ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ** :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯ ಮಕ್ಕಳೇ ಈ ರೋಗದಿಂದ ಬಳಲುವರು ಎಂದು ಹೇಳಲು ಕಠಿಣವಿದೆ. ಆದರೂ ನಾಜೂಕ ಪ್ರಕೃತಿಯ ರಾಶಿಯವರಾದ ವೃಷಭ, ಮಿಥುನ, ಕರ್ಕ, ಕನ್ಯಾ, ಮೀನ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬಂದಿದೆ.

**ಯೋಗಗಳು** :

೧) ಜಾತಕದಲ್ಲಿ ಅನೇಕ ಗ್ರಹಗಳು ಸ್ಥಿರರಾಶಿಯಲ್ಲಿದ್ದ ಬಾಲಕರು,

೨) ಚಂದ್ರ, ಬುಧ ದುರ್ಬಲರಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟ ಜಾತಕನು,

೩) ರವಿ, ಚಂದ್ರ, ಲಗ್ನ ಈ ಮೂರರಲ್ಲಿ ಯಾವದೇ ಎರಡು ಸ್ಥಿರ ರಾಶಿಯಲ್ಲಿರುವಿಕೆ,

೪) ಮಜ್ಜಾಸಂಸ್ಥೆಯ ಮೇಲೆ ಹಾಗೂ ಕೈಗಳ ಮೇಲೆ ಮಿಥುನ ರಾಶಿಯ ಪ್ರಭಾವವಿರುವದರಿಂದ ಜಾತಕದಲ್ಲಿ ಮಿಥುನರಾಶಿ ದೂಷಿತವಿರುವ,

೫) ಚಂದ್ರನು ಹೆಚ್ಚಾಗಿ ೩, ೬, ೮, ೧೨ ಈ ಸ್ಥಾನದಲ್ಲಿರುವ ಬಾಲಕರಿಗೆ,

೬) ಲಗ್ನದಲ್ಲಿ ಅನೇಕ ಗ್ರಹಗಳಿದ್ದು, ಲಗ್ನೇಶನು ನಿರ್ಬಲನಿದ್ದ ಬಾಲಕರಿಗೆ,

ಈ ಮೇಲಿನ ಆರು ಪ್ರಕಾರದ ಯೋಗಗಳಿದ್ದ ಜಾತಕನಿಗೆ ಈ ರೋಗದ ಬಾಧೆಯಿರುತ್ತದೆ.

## ೨. ಮುಡುದೋಷ (Rickets)

ಬಾಲಗ್ರಹದ ನಂತರ ಮಕ್ಕಳನ್ನು ಹೆಚ್ಚು ಬಾಧಿಸುವ ರೋಗವೆಂದರೆ ಮುಡುದೋಷವು. ಈ ರೋಗವು ಅನ್ನ ಉಣ್ಣುವ ವಯಸ್ಸಿನ ಮಕ್ಕಳಿಗೆ ವಿಶೇಷವಾಗಿ ಬರುತ್ತದೆ. ಕ್ವಚಿತ್ತಾಗಿ ೪–೫ ವಯಸ್ಸಿನ ಮಕ್ಕಳಿಗೂ ಈ ರೋಗ ಬಾಧಿಸುವದು ಕಂಡುಬಂದಿದೆ.

**ಕಾರಕಗ್ರಹ :** ಪೌಷ್ಟಿಕ ಆಹಾರದ ಅಭಾವದಿಂದಲೂ ನಿರ್ದಿಷ್ಟ ಜೀವನಸತ್ವದ ಕೊರತೆಯಿಂದಲೂ ಈ ರೋಗ ಬರುವದರಿಂದ ಮಕ್ಕಳ ಪೋಷಣೆ-ಬೆಳವಣಿಗೆಯ ಕಾರಕನೂ ಅನ್ನ, ಖಾದ್ಯ, ವನಸ್ಪತಿ ಕಾರಕನೂ ಆದ ಚಂದ್ರನೇ ಈ ರೋಗದ ಕಾರಕನು.

ಚಂದ್ರನ ತರುವಾಯ ಶನಿಯೂ ಕೆಲಮಟ್ಟಿಗೆ ಈ ರೋಗದ ಕಾರಕನಿರುವನು. ಏಕೆಂದರೆ ಈ ರೋಗದಲ್ಲಿ ಮಕ್ಕಳು ದಿನದಿಂದ ದಿನಕ್ಕೆ ಕ್ಷೀಣಿಸುತ್ತ ಹೋಗುತ್ತವೆ, ನವೆಯುತ್ತವೆ. ಅದರಲ್ಲಿಯೂ ಎಲವುಗಳು ಸಣ್ಣಾ

ಗುತ್ತವೆ ಹಾಗೂ ಸವಕಳಿಯಾಗುತ್ತವೆ. ಅಂತೆಯೇ "ಮೃದ್ವಸ್ಥಿ" ಎಂಬ ಇನ್ನೊಂದು ಹೆಸರು ಯಥಾರ್ಥವಿದೆ.

ಅಸ್ಥಿದೋಷವಾಗುವಿಕೆ, ಕ್ಷೀಣವಾಗುವಿಕೆ ಇದು ವಾತದೋಷದ ಲಕ್ಷಣವಿರುತ್ತದೆ. ಆದುದರಿಂದ ಶನಿಯೂ ಈ ರೋಗದ ಕಾರಕನಿರುವನು.

**ಲಗ್ನ :—** ಅಸ್ಥಿಯ ಮೇಲೆ ಮಕರರಾಶಿಯ ಪ್ರಭಾವವಿರುವದರಿಂದ ಜಾತಕದಲ್ಲಿ ಮಕರರಾಶಿ ದೂಷಿತವಿರುತ್ತದೆ. ಆದುದರಿಂದ ಮಿಥುನ, ಸಿಂಹ, ಮಕರ, ಕುಂಭ ಈ ಲಗ್ನದ ಬಾಲಕರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ರೋಗದ ಕಾರಕ ಸ್ಥಾನವೆಂದರೆ ತನು ಸ್ಥಾನವನ್ನೇ ಪರಿಶೀಲಿಸಬೇಕು. ಏಕೆಂದರೆ ಮಕ್ಕಳ ಬೆಳವಣಿಗೆಯಲ್ಲಿ ದೋಷವಿರುವಿಕೆ— ಅದರಲ್ಲಿಯೂ ಅಸ್ಥಿಗಳ ಬೆಳವಣಿಗೆಯು ವಯೋಮಾನದ ಪ್ರಮಾಣವಂತೆ ಆಗದಿರುವಿಕೆ— ಮುಖ್ಯ ಲಕ್ಷಣವಿರುವದರಿಂದ ತನುಸ್ಥಾನವೇ ಕಾರಕವಿರುತ್ತದೆ.

ತನುಸ್ಥಾನದ ನಂತರ ಚತುರ್ಥ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಈ ರೋಗದಲ್ಲಿ ಮಕ್ಕಳ ಎದೆಯ ಎಲವುಗಳು ಮುಂದೆ ಹಾಯ್ದಿರುತ್ತವೆ, ಗೂಡಿನಂತಿರುತ್ತವೆ. ಚತುರ್ಥ ಸ್ಥಾನವು ಎದೆಯ ಸ್ಥಾನವಿರುವದರಿಂದ ಕೆಲವಮ್ಮೆಗೆ ದೂಷಿತವಿರುತ್ತದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರು ಎಂದು ವರ್ಗೀಕರಿಸಲಾಗದು. ಆದರೂ ಸಹ ಮೀನ, ಮೇಷ, ಕರ್ಕ, ಮಕರ ಈ ರಾಶಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಆ ಜಾತಕರು ಈ ರೋಗದಿಂದ ಬಳಲುವರು ಎಂದು ಹೇಳಲಾಗುತ್ತದೆ. ಏಕೆಂದರೆ

೧) ಎದೆಯ ಎಲವುಗಳ ಮೇಲೆ (ಉರೋಸ್ಥಿ) ಕರ್ಕರಾಶಿಯ ಪ್ರಭಾವವಿರುತ್ತದೆ.

೨) ಮಕ್ಕಳ ಕಾಲುಗಳು ಕ್ಷೀಣಿಸುತ್ತವೆ, ಹಾಗೂ ಬಿಲ್ಲುಗಳಂತೆ

ಮಣಿದಿರುತ್ತವೆ. ಕಾಲುಗಳ ಮೇಲೆ ಮೀನ ರಾಶಿಯ ಪ್ರಭಾವವಿರುತ್ತದೆ.

೩) ಈ ರೋಗದಲ್ಲಿ ಮಕ್ಕಳ ತಲೆಯು ಶರೀರದ ಅಂಗಾಂಗಗಳ ಪ್ರಮಾಣಕ್ಕಿಂತ ದೊಡ್ಡದಿರುತ್ತದೆ. ತಲೆಯ ಮೇಲೆ ಮೇಷ ರಾಶಿಯ ಪ್ರಭಾವವಿರುತ್ತದೆ.

೪) ಎಲವುಗಳ ಮೇಲೆಯಂತೂ ಮಕರ ರಾಶಿಯ ಪ್ರಭಾವವಿರುತ್ತದೆ. ಹೀಗೆ ಮೇಷ, ಕರ್ಕ, ಮಕರ, ಮೀನ ಈ ರಾಶಿಗಳು ಯಾವ ಜಾತಕದಲ್ಲಿ ದೂಷಿತವಿರುವವೋ ಅಂಥ ಬಾಲಕರು ಈ ರೋಗದಿಂದ ಬಳಲುತ್ತಾರೆ.

## ೩. ಕೋಡಿಗ್ಗೆಮ್ಮು (Whooping Cough)

ಮಕ್ಕಳನ್ನು ಹೆಚ್ಚು ಹೈರಾಣ ಹಾಗೂ ನಿರ್ವಿಣ್ಣರನ್ನಾಗಿ ಮಾಡುವ ರೋಗಗಳಲ್ಲಿ ಕೋಡಿಗ್ಗೆಮ್ಮನ್ನು ಬಿಟ್ಟು ಬಹುಶಃ ಬೇರಾವ ರೋಗವೂ ಇರಲಿಕ್ಕಿಲ್ಲ. ಇದಕ್ಕೇನೇ "ನಾಯಿ ಕೆಮ್ಮು" ಎಂದು ಕರೆಯುವದು. ಇದೊಂದು ಸಾಂಸರ್ಗಿಕ ರೋಗವಿದ್ದು ಪ್ರಾಯಶಃ ಒಂದು ವರ್ಷದ ಮಕ್ಕಳಿಂದ ನಾಲ್ಕೈದು ವರ್ಷದ ವಯಸ್ಸಿನ ಮಕ್ಕಳವರೆಗೂ ಈ ರೋಗದ ಭೀತಿಯಿರುತ್ತದೆ. ಕ್ವಚಿತ್ತಾಗಿ ಎಂಟು ವರ್ಷದ ಮಕ್ಕಳಿಗೂ ಈ ರೋಗ ತಗಲಿದ ನಿದರ್ಶನಗಳುಂಟು. ಈ ರೋಗವು ಒಮ್ಮೆ ಪ್ರಾರಂಭವಾದರೆ ಒಂದೂವರೆ-ಎರಡು ತಿಂಗಳಗಳವರೆಗೂ ಇದರ ಉಪದ್ರವವಿರುತ್ತದೆ. ಕ್ವಚಿತ್ತಾಗಿ ೩-೪ ತಿಂಗಳವರೆಗೂ ಬಳಲುತ್ತಿರುವ ರೋಗಿಗಳನ್ನು ನೋಡಿದ ಅನುಭವವಿದೆ.

**ಕಾರಕಗ್ರಹ :—** ಈ ರೋಗದಲ್ಲಿ ಪ್ರಾಣವಹ ಶ್ರೋತಸ್ಸುಗಳು ದೂಷಿತವಾಗುವದರಿಂದ ಕಾಸವೇ ಪ್ರಧಾನ ಲಕ್ಷಣವಿರುವದರಿಂದ ವಾತ ದೋಷವೇ ಮುಖ್ಯವಿರುತ್ತದೆ. ಆದುದರಿಂದ ಶನಿಯೇ ಈ ರೋಗದ ಕಾರಕನು.

ನೆಗಡಿ-ಕೆಮ್ಮುಗಳಿಂದ ಈ ರೋಗ ಪ್ರಾರಂಭವಾಗುವದರಿಂದಲೂ ಬ್ರಾಂಕೋ ನಿಮೋನಿಯಾ ಉಪದ್ರವ ರೂಪದಲ್ಲಿ ಬರುವದರಿಂದಲೂ ಕಫ

ದೋಷ ಕೆಲಮಟ್ಟಿಗೆ ದೂಷಿತವಿರುವದರಿಂದಲೂ ಚಂದ್ರನೂ ಕೆಲಮಟ್ಟಿಗೆ ಈ ರೋಗದ ಕಾರಕನಾಗುವನು.

**ಕಾರಕಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯ, ಚತುರ್ಥ ಸ್ಥಾನಗಳೇ ಈ ರೋಗದ ಕಾರಕಸ್ಥಾನಗಳಿರುತ್ತವೆ. ಏಕೆಂದರೆ ದ್ವಿತೀಯ ಸ್ಥಾನವು ಕಂಠಸ್ಥಾನವೂ ಶ್ವಾಸನಲಿಕೆಯ ಸ್ಥಾನವೂ ಇರುತ್ತದೆ. ಶ್ವಾಸನಲಿಕೆಯಲ್ಲಿ ದೋಷವಿರುತ್ತದೆ. ಚತುರ್ಥ ಸ್ಥಾನವು ಪುಪ್ಪುಸ ಸ್ಥಾನ ವಿರುತ್ತದೆ ಪುಪ್ಪುಸದಲ್ಲಿಯೂ ದೋಷವಿರುತ್ತದೆ. ಆದುದರಿಂದ ದ್ವಿತೀಯ, ಚತುರ್ಥ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ದೂಷಿತರಿರುತ್ತಾರೆ.

**ಲಗ್ನ:** ಶ್ವಾಸನಲಿಕೆಯು ಮೇಲೆ ವೃಷಭರಾಶಿಯ ಪ್ರಭಾವವಿರುತ್ತವೆ. ಪುಪ್ಪುಸದ ಮೇಲೆ ಮಿಥುನ ರಾಶಿಯ ಪ್ರಭಾವವಿರುತ್ತದೆ. ಈ ಎರಡೂ ರಾಶಿಗಳು ದೂಷಿತವಿರುವದರಿಂದ ಕರ್ಕ, ವೃಶ್ಚಿಕ, ಮಕರ, ಮಿಥುನ, ಮೇಷ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ:**- ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಈ ರೋಗವು ಸಾಂಸರ್ಗಿಕ ರೋಗವಿರುವದರಿಂದ ಸಾಂಸರ್ಗಿಕ ರಾಶಿಗಳಾದ ಕರ್ಕ, ವೃಶ್ಚಿಕ, ಮೀನ, ವೃಷಭ ಮಿಥುನ, ಕನ್ಯಾ ಈ ರಾಶಿಗಳ ಬಾಲಕರು ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ಯೋಗಗಳು:**— ೧) ಚತುರ್ಥ, ಅಷ್ಟಮ, ದಶಮ ಈ ಸ್ಥಾನಗಳಲ್ಲಿ ಅನೇಕ ಗ್ರಹಗಳಿದ್ದ ಬಾಲಕರಿಗೆ, ೨) ಚಂದ್ರನು ೨, ೪, ೬, ೮ ಈ ಸ್ಥಾನದಲ್ಲಿದ್ದು ಶನಿಯಿಂದ ನೋಡಲ್ಪಟ್ಟ ಬಾಲಕರಿಗೆ ಈ ರೋಗದ ಉಪದ್ರವ ಬಹಳ. ಮೇಲ್ಕಂಡ ಯೋಗಗಳಿದ್ದ ಬಾಲಕರಿಗೆ ಈ ರೋಗದ ಭೀತಿ ಬಹಳವಿರುತ್ತದೆ.

## ೪. ಗಂಟಲುಬೇನೆ ( ಘಟಸರ್ಪ = ಡಿಫ್ಥೇರಿಯಾ )
## ( Diphtheria )

ಮಕ್ಕಳಿಗಾಗುವ ಸಾಂಸರ್ಗಿಕ ರೋಗಗಳಲ್ಲಿ ತೀವ್ರ ಸಂಕರೋಗವೆಂದರೆ ಡಿಫ್ಥೇರಿಯಾ ರೋಗವೆನ್ನಬಹುದು. ಇವಕ್ಕೇನೇ "ಘಟಸರ್ಪ" ಎಂದು ರೂಢಿಯಲ್ಲಿರುವ ಹೆಸರು.

ಈ ರೋಗದಲ್ಲಿ ಜ್ವರವು ತೀವ್ರವಾಗಿದ್ದು ಗಂಟಲಿನಲ್ಲಿ ಶೋಥದಾಹದಿಂದಾಗಿ ಮಾತನಾಡುವ ಶಕ್ತಿಯೇ ಹೋಗುತ್ತದೆ. ಅಷ್ಟೇ ಏಕೆ? ಬಾಯಿ ತೆರೆಯಲೂ, ನುಂಗಲೂ, ಉಸಿರಾಡಿಸಲೂ ಕೂಡ ಕಠಿಣವಾಗುತ್ತದೆ. ಈ ಎಲ್ಲ ಲಕ್ಷಣಗಳು ಪಿತ್ತದೋಷದಲ್ಲಿರುವದರಿಂದ ರವಿ, ಮಂಗಳರೇ ಈ ರೋಗದ ಕಾರಕರು.

ಈ ರೋಗದ ಪ್ರಾರಂಭವು ನೆಗಡಿ, ಕೆಮ್ಮುಗಳಿಂದ ಬರುತ್ತದೆ. ಇದಲ್ಲದೆ ಕೋಡಿಗ್ಗೆಮ್ಮು, ಇನ್‌ಫ್ಲುಯೆಂಝಾದಿಂದ ಬಳಲುತ್ತಿರುವ ಮಕ್ಕಳಿಗೆ ಈ ರೋಗ ಬೇಗ ತಗಲುವ ಸಂಭವವಿರುವದರಿಂದಲೂ, ಕಫ ಸ್ಥಾನವಾದ ಗಂಟಲಿನಲ್ಲಿಯೇ ದೋಷವಿರುವದರಿಂದಲೂ, ಕಫದೋಷ ಕೆಲವುಮಟ್ಟಿಗೆ ಇರುತ್ತದೆ. ಆದುದರಿಂದ ಚಂದ್ರನೂ ಕೆಲಮಟ್ಟಿಗೆ ಕಾರಕನಿರುವನು.

**ಕಾರಕಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಏಕೆಂದರೆ ದ್ವಿತೀಯ ಸ್ಥಾನವು ಗಂಟಲಸ್ಥಾನವಿರುತ್ತದೆ. ಇದಲ್ಲದೆ ಧ್ವನಿ, ಕುತ್ತಿಗೆ, ಶ್ವಾಸನಲಿಕೆ, ಇವುಗಳ ಮೇಲೆಯೂ ಈ ರೋಗದ ಪರಿಣಾಮವಾಗುತ್ತದೆ. ಈ ಎಲ್ಲ ಅಂಶಗಳು ಜಾತಕದ ದ್ವಿತೀಯ ಸ್ಥಾನದಿಂದ ತಿಳಿಯುತ್ತವೆ.

ದ್ವಿತೀಯ ಸ್ಥಾನದ ಜೊತೆಗೆ ಅಷ್ಟಮ ಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಈ ರೋಗನಿವಾರಣೆ ಕಷ್ಟಸಾಧ್ಯವಿರುವದಲ್ಲದೆ ಮಕ್ಕಳು ಈ ರೋಗದಿಂದ ಗುಣಮುಖಿವಾಗುವದು ಕಡಿಮೆ. ಆದುದರಿಂದ ಅಲ್ಪಾಯುಕಾರಕ ಸ್ಥಾನವೂ ತೀವ್ರ ಮರಣಸೂಚಕ ಸ್ಥಾನವೂ ಆದ ಅಷ್ಟಮ ಸ್ಥಾನವನ್ನು ಪರಿಶೀಲಿಸಬೇಕು. ಅಷ್ಟಮ ಸ್ಥಾನವು ದ್ವಿತೀಯ ಸ್ಥಾನದ ಸಪ್ತಮದಲ್ಲಿರುವದರಿಂದ ಅಷ್ಟಮಸ್ಥಾನವಲ್ಲಿರುವ ಗ್ರಹಗಳ ಪರಿಣಾಮವೂ ದ್ವಿತೀಯ ಸ್ಥಾನದ ಮೇಲೆ ಆಗುತ್ತದೆ.

**ಲಗ್ನ :** – ಗಂಟಲಿನ ಹಾಗೂ ಕುತ್ತಿಗೆಯ ಮೇಲೆ ವೃಷಭ ರಾಶಿಯ ಪ್ರಭಾವವಿರುತ್ತದೆ. ಜಾತಕದಲ್ಲಿ ವೃಷಭರಾಶಿ ದೂಷಿತವಿರದೆ ಈ ರೋಗ ಬರಲಾರದು. ಆದುದರಿಂದ ಮೇಷ, ವೃಷಭ, ಮಿಥುನ, ತುಲಾ, ಧನು ಈ ಲಗ್ನದ ಬಾಲಕರೇ ಈ ರೋಗದಿಂದ ಬಳಲುತ್ತಿರುವದು ಕಂಡುಬರುತ್ತದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳಲು ಬಾರದು.

**ಯೋಗಗಳು :—** ಈ ಕೆಳಗಿನ ಯೋಗಗಳಿದ್ದರೆ ಗಂಟಲುಬೇನೆ ಬರುವ ಭೀತಿಯಿರುತ್ತದೆ.

೧) ಜಾತಕದಲ್ಲಿ ವೃಷಭ ಇಲ್ಲವೆ ವೃಶ್ಚಿಕದಲ್ಲಿ ಅನೇಕ ಗ್ರಹಗಳಿದ್ದರೆ ಅದರಲ್ಲೂ ಹೆಚ್ಚಾಗಿ ಚಂದ್ರನು ವೃಷಭ, ವೃಶ್ಚಿಕ ರಾಶಿಗಳಲ್ಲಿ ಪಾಪಗ್ರಹಗಳು ಮಧ್ಯದಲ್ಲಿದ್ದರೆ,

೨) ಅಷ್ಟಮಸ್ಥಾನ ಅಥವಾ ದ್ವಿತೀಯ ಸ್ಥಾನದಲ್ಲಿ ಅನೇಕ ಗ್ರಹಗಳಿದ್ದು ಅಷ್ಟಮೇಶ, ದ್ವಿತೀಯೇಶರು ದುರ್ಬಲರಿದ್ದರೆ,

೩) ವೃಷಭರಾಶಿಯಲ್ಲಿ ರವಿ, ಶನಿ, ಮಂಗಳರಿದ್ದು ಮೇಷ, ಮಿಥುನ, ತುಲಾ, ಧನು ಈ ಲಗ್ನವಿದ್ದರೆ,

## ೫. ಪೋಲಿಯೆೊ (Polio)
## ಮಕ್ಕಳ ಅರ್ಧಾಂಗ

ಚಿಕ್ಕಮಕ್ಕಳ ಬೆಳವಣಿಗೆಗೆ ಕುಠಾರಪ್ರದವಾದ ರೋಗವೆಂದರೆ ಪೋಲಿಯೋ. ಇದೊಂದು ಸಾಂಕ್ರಾಮಿಕರೋಗವಿದ್ದು, ಪಿಡುಗಿನ ರೂಪವಾಗಿ ಬರುತ್ತದೆ. ಈ ರೋಗದಿಂದ ಬದುಕಿದರೂ ಅವರು ಕೈಕಾಲು ಕಳೆದುಕೊಂಡ ಇಲ್ಲವೆ ಮೆದುಳಿನ ಬೆಳವಣಿಗೆಯಲ್ಲಿ ವಿಕೃತವಾದ ಹೀಗೆ ಅಂಗವಿಕಲರಾದ ಮಕ್ಕಳನ್ನು ನೋಡಬಹುದು. ಅಂತೆಯೇ ಇದಕ್ಕೆ **ಬಾಲಾರ್ಧಾಂಗ** ಎಂಬ ಹೆಸರಿದೆ.

**ಕಾರಕಗ್ರಹ :—** ಜ್ವರದಿಂದ ಈ ರೋಗ ಪ್ರಾರಂಭವಾಗುವದರಿಂದಲೂ ಮಸ್ತಿಷ್ಕ ಹಾಗೂ ಬೆನ್ನಿನ ಹುರಿಯಲ್ಲಿ (Spinal cord) ದೋಷವಿರುವದರಿಂದಲೂ ಪಿತ್ತಪ್ರಧಾನವಾದ ದೋಷವಿರುವದರಿಂದಲೂ ರವಿಯೇ ಈ ರೋಗದ ಕಾರಕನು.

ರವಿಯ ನಂತರ ಶನಿಯು ಈ ರೋಗದ ಕಾರಕನಿರುವನು. ಏಕೆಂದರೆ ಅಂಗವಿಕೃತವಾಗುವ (ಅಂಗವಿಹೀನ) ಗುಣಧರ್ಮವು ಶನಿಗ್ರಹದಲ್ಲಿ ಇರುತ್ತದೆ. ಈ ರೋಗದಿಂದ ಗುಣಹೊಂದಿದ ಮಕ್ಕಳ ಕೈಕಾಲುಗಳ ಶಕ್ತಿ ಹೋಗಿ ಅರ್ಧಾಂಗವಾಯುವಿನಿಂದ ಬಳಲುವವರಂತೆ ಬಳಲುವದರಿಂದ ಶನಿಯೂ ಕಾರಕನಿರುತ್ತಾನೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಎರಡು ಸ್ಥಾನಗಳನ್ನು ಪರೀಕ್ಷಿಸಬೇಕು. ೧) ತನುಸ್ಥಾನ, ೨) ಚತುರ್ಥಸ್ಥಾನ. ಮಸ್ತಿಷ್ಕದಲ್ಲಿ ದೋಷವಿರುವದರಿಂದ ಮಸ್ತಿಷ್ಕಸ್ಥಾನವಾದ ತನುಸ್ಥಾನವೂ, ಬೆನ್ನಿನ ಹುರಿಯಲ್ಲಿ ದೋಷವಿರುವದರಿಂದ ಬೆನ್ನಿನ ಹುರಿಯ ಸ್ಥಾನವಾದ ಚತುರ್ಥಸ್ಥಾನವೂ ಕಾರಕಗಳಿದ್ದು, ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ದೂಷಿತರಿರುತ್ತಾರೆ.

**ಲಗ್ನ :—** ಬೆನ್ನಿನ ಹುರಿಯ ಮೇಲೆ ಸಿಂಹರಾಶಿಯ ಪ್ರಭಾವವಿರುತ್ತದೆ. ಮಸ್ತಿಷ್ಕದ ಮೇಲೆ ಮೇಷರಾಶಿಯ ಪ್ರಭಾವವಿರುತ್ತದೆ. ಆದುದರಿಂದ ಜಾತಕದಲ್ಲಿ ಮೇಷ, ಸಿಂಹರಾಶಿಗಳು ದೂಷಿತವಿರುವದರಿಂದ ಮೇಷ, ವೃಷಭ, ಸಿಂಹ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಲಗ್ನಗಳ ಬಾಲಕರೇ ಈ ರೋಗದಿಂದ ಹೆಚ್ಚು ಬಳಲುತ್ತಿರುವದು ಕಂಡುಬಂದಿದೆ.

**ರಾಶಿ : –** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯ ಬಾಲಕರೇ ಈ ರೋಗದಿಂದ ಬಳಲುತ್ತಿರುವರೆಂದು ಹೇಳಲು ಬಾರದು.

**ಯೋಗಗಳು : –** ೧) ಚತುರ್ಥ ಹಾಗೂ ತನುಸ್ಥಾನದ ಹೊರತಾಗಿ ದಶಮ, ಸಪ್ತಮ ಸ್ಥಾನಗಳೂ ದೂಷಿತರಿರುವ ಬಾಲಕರಿಗೆ ಈ ರೋಗದ ಉಪದ್ರವ ಬಹಳ. ೨) ಮೇಷ ಹಾಗೂ ಸಿಂಹ ರಾಶಿಗಳ ಹೊರತಾಗಿ ತುಲಾ, ಕುಂಭ ಈ ರಾಶಿಗಳೂ ಜಾತಕದಲ್ಲಿ ದೂಷಿತವಿದ್ದ ಬಾಲಕರಿಗೂ ಈ ರೋಗದ ಭೀತಿಯಿರುತ್ತದೆ. ಮೇಲ್ಕಂಡ ಎರಡು ಸ್ಥಾನಗಳು ಹಾಗೂ ರಾಶಿಗಳು ಯೋಗಕಾರಕ ರಾಶಿಸ್ಥಾನಗಳ ಸಮಸಪ್ತಕವಿರುವದರಿಂದ ಇವುಗಳ ಪರಿಣಾಮವು ಆಗುತ್ತದೆ.

## ೬. ಮಸ್ತಿಷ್ಕಾವರಣ ದಾಹ (Meningitis)
## (ಮೆನಿಂಜಾಯಿಟಿಸ್)

ಈ ವಿಕಾರವು ಹೆಚ್ಚಾಗಿ ಚಿಕ್ಕಮಕ್ಕಳಲ್ಲಿರುವದು ಕಂಡುಬರುತ್ತದೆ. ಅದರಲ್ಲಿಯೂ ಗಂಡುಕ್ಕಳಿಗೆ ಹೆಚ್ಚು. ವಸಂತ ಹಾಗೂ ಹೇಮಂತ ಋತು ಗಳಲ್ಲಿ ಇದರ ಉಪದ್ರವ ಬಹಳ. ಟಾನ್ಸಿಲ್ಸ್ ದಿಂದ ಬಳಲುವ ಹಾಗೂ ಮೇಲಿಂದ ಮೇಲೆ ಶೀತಬಾಧೆಯಿಂದ ಬಳಲುವ, ಕಿವಿ ಸೋರುವ, (ಕಿವಿ ಶೂಲೆಯ) ಮಕ್ಕಳಿಗೂ ಈ ರೋಗ ಬರುವದು ಹೆಚ್ಚಾಗಿ ಕಂಡುಬರುತ್ತದೆ.

**ಕಾರಕಗ್ರಹ:—** ಈ ರೋಗದಲ್ಲಿ ಮೆದುಳಿನ ಆವರಣಗಳು ಕಫದೋಷ ದಿಂದ ವಿಕೃತವಾಗುತ್ತವೆ. ಹಾಗೂ ಮಸ್ತಿಷ್ಕಾವರಣದಲ್ಲಿ ಬಾವು ಉಂಟಾಗು ತ್ತದೆ, ಗಂಟು ಉಂಟಾಗುತ್ತದೆ, ಕಫ ಸ್ಥಾನಗಳಾದ ತಲೆ, ಕುತ್ತಿಗೆಗಳೇ ದೂಷಿತವಿರುವದರಿಂದ ಚಂದ್ರನೇ ರೋಗದ ಕಾರಕನಿರುವನು.

ಕಫದ ತರುವಾಯ ಪಿತ್ತದೋಷವೂ ಕೆಲವುಮಟ್ಟಿಗೆ ಇರುತ್ತದೆ. ಬೆನ್ನಿನಹುರಿಯ ಮೇಲೆ ರವಿಯ ಪ್ರಭುತ್ವವಿರುವದರಿಂದ ರವಿಯೂ ಈ ರೋಗದ ಕಾರಕನಿರುವನು.

**ಸ್ಥಾನ:** - ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಮೂರು ಸ್ಥಾನ ಗಳನ್ನು ಪರಿಶೀಲಿಸಬೇಕು. ೧) ತನುಸ್ಥಾನ, ೨) ದ್ವಿತೀಯ ಸ್ಥಾನ, ೩) ಚತುರ್ಥ ಸ್ಥಾನ. ಮಸ್ತಿಷ್ಕದಲ್ಲಿ ದೋಷವಿರುವದರಿಂದ ಮಸ್ತಿಷ್ಕಸ್ಥಾನವಾದ ತನುಸ್ಥಾನವು, ಬೆನ್ನಿನ ಹುರಿಯಲ್ಲಿ ದೋಷವಿರುವದರಿಂದ ಬೆನ್ನಿನ ಹುರಿಯ ಸ್ಥಾನವಾದ ಚತುರ್ಥಸ್ಥಾನವು ಕಾರಕಗಳಿರುತ್ತವೇನೋ ನಿಜ, ಆದರೆ ಈ ರೋಗದಲ್ಲಿ ರೋಗಿಗಳ ಗೋಣುಗಳು ಬಿಗಿಯುತ್ತವೆ, ರೋಗಿಗಳು ಗೋಣು ಗಳನ್ನು ಮೇಲಿಂದ ಮೇಲೆ ಅಲುಗಾಡಿಸುತ್ತಾರೆ. ಆದುದರಿಂದ ಕುತ್ತಿಗೆಯ ಸ್ಥಾನವಾದ ದ್ವಿತೀಯ ಸ್ಥಾನವನ್ನೂ ಪರೀಕ್ಷಿಸಬೇಕು.

**ಕಾರಕಗ್ರಹ:—** ಮಸ್ತಕದ ಮೇಲೆ ಮೇಷ ರಾಶಿಯ ಪ್ರಭಾವವಿರು ತ್ತದೆ. ಬೆನ್ನಿನ ಹುರಿಯ ಮೇಲೆ ಸಿಂಹರಾಶಿಯ ಪ್ರಭಾವವಿರುತ್ತದೆ. ಆದುದ ರಿಂದ ಈ ಎರಡೂ ರಾಶಿಗಳು ಜಾತಕದಲ್ಲಿ ದೂಷಿತವಿರುವದರಿಂದ ಮೇಷ,

ವೃಷಭ, ಸಿಂಹ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುತ್ತಿರುವರೆಂದು ಹೇಳಲು ಬಾರದು.

**ಯೋಗಗಳು :—** ಈ ಕೆಳಗಿನ ನಾಲ್ಕು ವಿಧದ ಯೋಗಗಳಲ್ಲಿ ಜನಿಸಿದ ಜಾತಕರಿಗೆ ಈ ರೋಗದ ಭೀತಿಯಿರುತ್ತದೆ.

೧) ರವಿ-ಶನಿಯರ ಸಮಸಪ್ತಕವು ಲಗ್ನಸಪ್ತಮದಲ್ಲಿದ್ದರೆ,

೨) ಮೇಷ ರಾಶಿಯಲ್ಲಿ ರವಿಯೂ, ತುಲಾ ರಾಶಿಯಲ್ಲಿ ಶನಿಯೂ ಇದ್ದರೆ,

೩) ಶನಿಯಿಂದ ದೃಷ್ಟಿಲ್ಪಟ್ಟ ರವಿ, ಚಂದ್ರರಿದ್ದರೆ,

೪) ಮೇಷ ರಾಶಿಯ ಚಂದ್ರನು ನಿರ್ಬಲನಿದ್ದರೆ, ಅಥವಾ ತುಲಾ ರಾಶಿಯ ರವಿಯು ಶನಿ, ರಾಹು, ಕೇತುಗಳಿಂದ ಯುತ ಇಲ್ಲವೆ ದೃಷ್ಟಿಸಲ್ಪಟ್ಟರೆ

## ೭. ಮಂಗನ ಬಾವು (Mumps)

ಚಿಕ್ಕಮಕ್ಕಳಿಗೆ ಈ ರೋಗ ಉಂಟಾಗುತ್ತಿದ್ದರೂ ತೀರ ಚಿಕ್ಕಮಕ್ಕಳಲ್ಲಿ ಬರದೆ ಕಿಶೋರಾವಸ್ಥೆಯ ಮಕ್ಕಳಿಗೆ ಇದರ ಉಪದ್ರವ ಬಹಳ. ಇದೊಂದು ಸಾಂಸರ್ಗಿಕ ರೋಗವಿದ್ದು, ಎರಡು ವರ್ಷದ ಮಕ್ಕಳಿಂದ ೧೦-೧೨ ವರ್ಷದ ವಯಸ್ಸಿನ ಮಕ್ಕಳಿಗೂ ಇದರ ಭೀತಿಯಿರುತ್ತದೆ.

**ಕಾರಕ ಗ್ರಹ:—** ಜ್ವರ, ಶೋಥ, ದಾಹ, ಇವೇ ಮೊದಲಾದ ಲಕ್ಷಣಗಳಿರುವದರಿಂದ ಪಿತ್ತ ದೋಷವೇ ಪ್ರಧಾನವಿರುತ್ತದೆ. ಆದುದರಿಂದ ಮಂಗಳನೇ ಈ ರೋಗದ ಕಾರಕನು.

**ಕಾರಕ ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಕಿವಿಗಳ ಕೆಳಭಾಗದ ಲಾಲಾಪಿಂಡಗಳಲ್ಲಿ ದೋಷವುಂಟಾಗಿ ಶೋಥ ಬರುವದರಿಂದ ಕರ್ಣಸ್ಥಾನವಾದ ತೃತೀಯ ಸ್ಥಾನವೇ ಈ ರೋಗದ ಕಾರಕಸ್ಥಾನವಿರುತ್ತದೆ.

ತೃತೀಯ ಸ್ಥಾನ ಹಾಗೂ ತೃತೀಯೇಶ ನಿರ್ಬಲವಿರದೆ ಯಾವ ಮಕ್ಕಳಿಗೂ ಈ ರೋಗ ಬರಲಾರದು.

ತೃತೀಯ ಸ್ಥಾನದ ನಂತರ ಪಂಚಮಾಷ್ಟಮ ಸ್ಥಾನಗಳನ್ನು ಪರಿಶೀಲಿಸ ಬೇಕು. ಏಕೆಂದರೆ ಈ ರೋಗವ ಭೀತಿಪಿಂತ ಈ ರೋಗದಿಂದ ಬರುವ ಉಪದ್ರವಗಳೇ ಭಯಂಕರವಾಗಿರುತ್ತವೆ. ಅಂಗವಿಕೃತವಾಗಲು ಕಾರಣ ವಾಗುತ್ತದೆ. ಹೆಣ್ಣುಮಕ್ಕಳ ಜಾತಕದಲ್ಲಿ ತೃತೀಯದೊಂದಿಗೆ ಪಂಚಮ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಹೆಣ್ಣು ಹುಡುಗಿಯರ ಸ್ತ್ರೀಬೀಜ ಕೋಶಗಳಿಗೆ ಬಾವು ಬಂದು ನಾಶವಾಗುವ ಸಂಭವವಿರುತ್ತದೆ.

ಇದರಂತೆಯೇ ಈ ರೋಗದ ಉಪದ್ರವದಿಂದ ಗಂಡುಮಕ್ಕಳ ಅಂಡ ಗಳಿಗೆ ಶೋಥ ಬಂದು ನಿಷ್ಕ್ರಿಯವನ್ನಾಗಿ ಮಾಡುವ ಸಂಭವವಿರುತ್ತದೆ. ಆದುದರಿಂದ ತೃತೀಯ ಸ್ಥಾನದ ಜೊತೆಗೆ ಪಂಚಮಾಷ್ಟಮ ಸ್ಥಾನಗಳನ್ನೂ ಪರಿಶೀಲಿಸುವದರಲ್ಲಿ ಔಚಿತ್ಯವಿದೆ.

**ಲಗ್ನ:**— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ವೃಶ್ಚಿಕ, ಧನು, ಕುಂಭ ಈ ಲಗ್ನದವರೇ ಈ ರೋಗದಿಂದ ಬಳಲು ತ್ತಿರುವದು ಕಂಡುಬಂದಿದೆ.

**ರಾಶಿ:** - ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯ ಬಾಲಕರೇ ಈ ರೋಗದಿಂದ ಬಳಲುವರು ಎಂದು ಹೇಳಲು ಬಾರದು.

## ಯಕೃತ್ ದೋಷ (Liver trouble)

ಚಿಕ್ಕಮಕ್ಕಳಿಗೆ ಹೆಚ್ಚು ಬಾಧಿಸುವ ರೋಗಗಳಲ್ಲಿ ಯಕೃತ್ ವಿಕಾರವೂ ಒಂದು. ಯಕೃತ್ ವಿಕಾರವೆಂದರೆ ಯಕೃತ್‌ದೊಳಗಿನ ಕಾರ್ಯವು ಸರಿ ಯಾಗಿ ನಡೆಯದೇ ಇರುವದು. ಚಿಕ್ಕಮಕ್ಕಳು ಮೇಲಿಂದ ಮೇಲೆ ತಿನ್ನು ವದರಿಂದ ಅದರಲ್ಲಿಯೂ ಸಿಹಿ, ಮಧುರ, ಸ್ನಿಗ್ಧ, ಪಿಷ್ಟಮಯ ಪದಾರ್ಥ ಗಳನ್ನು (ಕಾರ್ಬೋಹೈಡ್ರೇಟ್ಸ್) ಮೇಲಿಂದಮೇಲೆ ಸೇವಿಸುವದರಿಂದಲೂ ಮಣ್ಣು, ಬೂದಿ, ಇದ್ದಲಿ ಇವುಗಳನ್ನು ಸೇವಿಸುವುದರಿಂದ ಸಹ ಅಜೀರ್ಣ ವಾಗಿ ಮಾಂದ್ಯದಿಂದ ಯಕೃತ್ತಿನ ಮೇಲೆ ಹೆಚ್ಚಿನ ಭಾರಬಿದ್ದು ಅದರ

ಕಾರ್ಯ ಸರಿಯಾಗಿ ನಡೆಯುವದಿಲ್ಲ. ಆದ್ದರಿಂದ ಯಕೃತ್ತು ಬೆಳೆಯುತ್ತದೆ. ದೊಡ್ಡ ಹೊಟ್ಟೆ (ಉದರ ರೋಗ) ಉಂಟಾಗುತ್ತದೆ.

**ಕಾರಕ ಗ್ರಹ:—** ಈ ರೋಗದಲ್ಲಿ ದೊಡ್ಡ ಹೊಟ್ಟೆಯಾಗುವಿಕೆ. ಜಲಾಂಶ ಅಧಿಕವಾಗುವಿಕೆ ಇವು ಪ್ರಧಾನ ದೋಷವಿರುವದರಿಂದ ಇದು ಕಫ ಪ್ರಧಾನ ದೂಷಿತವಿರುತ್ತದೆ.

ಯಕೃತ್ತಿನ ಮೇಲ ಗುರುಗ್ರಹದ ಆಧಿಪತ್ಯವಿರುತ್ತದೆ. ಇದಲ್ಲದೆ ಸಿಹಿ, ಸಿಗ್ಧ, ಪಿಷ್ಟಮಯ ಪದಾರ್ಥಗಳ ಮೇಲೆ ಗುರು ಕಾರಕನು. ಕಫದೋಷದ ಮೇಲೆಯೂ ಗುರು ಕಾರಕನು. ಆದುದರಿಂದ ಈ ರೋಗದ ಕಾರಕಗ್ರಹ ವೆಂದರೆ ಗುರುವು. ಗುರುವು ದೂಷಿತವಿರದೆ ಯಾವ ಮಕ್ಕಳೂ ಯಕೃತ್ ದೋಷದಿಂದ ಬಳಲಲಾರರು. ಗುರುವಿನ ತರುವಾಯ ಚಂದ್ರನೂ ಕೆಲ ಮಟ್ಟಿಗೆ ಕಾರಕನು. ಏಕೆಂದರೆ ಹೊಟ್ಟೆಯ ಮೇಲೆ ಜಲಾಂಶ ಸಂಗ್ರಹ ವಾಗುವಿಕೆ, ಅಧಿಕವಾಗುವಿಕೆ, ಹೊಟ್ಟೆ ದೊಡ್ಡದಾಗುವಿಕೆ — ಇವೆಲ್ಲ ಚಂದ್ರ ಗ್ರಹದ ಗುಣ ಧರ್ಮಗಳು.

**ಕಾರಕ ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ, ಪಂಚಮ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತವೆ. ಏಕೆಂದರೆ ಪಂಚಮಸ್ಥಾನವು ಯಕೃತ್ ಸ್ಥಾನವಿರುತ್ತದೆ. ಇದಲ್ಲದೆ ಈ ರೋಗದಲ್ಲಿ ಪಾಂಡುತೆ, ಪ್ಲೀಹ ವೃದ್ಧಿ, ಉದರರೋಗ ಉಪದ್ರವ ರೂಪವಾಗಿ ಬರುವ ಸಂಭವವಿರುತ್ತದೆ. ಪ್ಲೀಹವೃದ್ಧಿ, ಪಾಂಡುತೆ, ಉದರ ಈ ರೋಗಗಳಿಗೆ ಕಾರಕಸ್ಥಾನವು ಪಂಚಮ ಸ್ಥಾನವಿರುತ್ತದೆ. ಆದುದರಿಂದ ಪಂಚಮಸ್ಥಾನ ಹಾಗೂ ಪಂಚಮೇಶ ದೂಷಿತವಿರದೆ ಯಾರಿಗೂ ಯಕೃತ್ತಿನ ದೋಷವು ಬರಲಾರದು.

ಪಂಚಮಸ್ಥಾನದ ನಂತರ ಷಷ್ಠಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಅಗ್ನಿಮಾಂದ್ಯ, ಅಪಚನಗಳೇ ಈ ರೋಗದ ಪ್ರಧಾನ ಲಕ್ಷಣಗಳಿರು ವದರಿಂದ ಕೋಷ್ಠಾಗ್ನಿಯ ಸ್ಥಾನವಾದ ಷಷ್ಠಸ್ಥಾನವನ್ನು ಪರಿಶೀಲಿಸುವದ ರಲ್ಲಿ ಔಚಿತ್ಯವಿದೆ.

**ಕಾರಕಲಗ್ನ:—** ಯಕೃತ್ತಿನ ಹಾಗು ಉದರದ ಮೇಲೆ ಸಿಂಹರಾಶಿಯು ಪ್ರಭಾವವಿರುತ್ತದೆ. ಆದುದರಿಂದ ಸಿಂಹರಾಶಿ ದೂಷಿತವಿರದೆ ಯಾರಿಗೂ

ಯಕೃತ್ತಿನ ವಿಕಾರವಾಗುವದಿಲ್ಲ. ಆದ್ದರಿಂದ ಮೇಷ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟವಾದ ರಾಶಿಯವರೇ ಈ ರೋಗದಿಂದ ಬಳಲುತ್ತಾರೆ ಎಂದು ಹೇಳುವದು ಕಠಿಣವಿದ್ದರೂ ಮೇಲಿಂದ ಮೇಲೆ ತಿನ್ನುವ-ಉಣ್ಣುವ ತಿನಸುಭಕ್ಕರಿಗೂ, ಅಗ್ನಿ-ಮಾಂದ್ಯ, ಅಪಚನವಿರುವ ಜನರಿಗೂ ಹಾಗು ಮಕ್ಕಳಿಗೆ ಈ ರೋಗ ಬರುವ ಸಂಭವವಿರುವದರಿಂದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ರಾಶಿಯ ಜನರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡು ಬರುತ್ತದೆ.

## ೯. ಮಲೇರಿಯಾ (Malaria)

ಜ್ವರಗಳಲ್ಲಿ ಅನೇಕ ಪ್ರಕಾರಗಳುಂಟು. ಆದರೆ ಸಾಮಾನ್ಯವಾಗಿ ಎಲ್ಲರಿಗೂ ಅತ್ಯಂತ ಪರಿಚಿತವಿರುವ ಜ್ವರವೆಂದರೆ ಚಳಿಜ್ವರ ಇದಕ್ಕೆ "ಮಲೇರಿಯಾ" ಎಂಬ ಹೆಸರು ಪ್ರಚಲಿತದಲ್ಲಿದೆ. ಶಾಸ್ತ್ರೀಯ ಭಾಷೆಯಲ್ಲಿ ಹೇಳಬೇಕಾದರೆ "ಶೀತಪೂರ್ವಕ ಜ್ವರ"ವೆಂದು ಕರೆಯಲಾಗುತ್ತದೆ. ಈ ರೋಗದ ಉಪದ್ರವ ಮಲೆನಾಡಿನಲ್ಲಿ ಬಹಳ.

ಸೊಳ್ಳೆಗಳು ಕಚ್ಚಿದವರಿಗೆಲ್ಲ ಚಳಿಜ್ವರ ಬಂದೇ ಬರುತ್ತದೆ ಎಂಬ ಕಾರಣವನ್ನು ಜ್ಯೋತಿಷ್ಯ ಶಾಸ್ತ್ರವು ಒಪ್ಪುವದಿಲ್ಲ. ಪ್ರತಿಯೊಬ್ಬರ ದೇಹದಲ್ಲಿರುವ ನೈಸರ್ಗಿಕ ಪ್ರತೀಕಾರ ಶಕ್ತಿಯೇ ಕಾರಣವಿರುತ್ತದೆ. ಈ ನೈಸರ್ಗಿಕ ಪ್ರತೀಕಾರ ಶಕ್ತಿಯು ಯಾರಲ್ಲಿದೆ ? ಯಾರಿಗೆ ಈ ರೋಗದ ಉಪದ್ರವವಿರುವದೆಂಬುದನ್ನು ಜನ್ಮಕುಂಡಲಿಯ ಆಧಾರದಿಂದ ಗ್ರಹಗಳ ಗಣಿತ ಗುಣಿತದಿಂದ ಹೇಳಲು ಸಾಧ್ಯವಿದೆ.

**ಕಾರಕಗ್ರಹ:—** ರೋಗದ ಹೆಸರೇ ಸೂಚಿಸುವಂತೆ ಚಳಿಯಿಂದ ಈ ರೋಗವು ಪ್ರಾರಂಭವಾಗುತ್ತದೆ. ಗದಗದ ನಡಗುವಿಕೆ (ದೊಡ್ಡ ಚಳಿ), ಕೈಕಾಲು ಬಳಬಳ ಅನ್ನುವಿಕೆ ಮುಖ್ಯ ಲಕ್ಷಣವಿರುವದರಿಂದ ವಾತದೋಷವೇ ಪ್ರಧಾನವಾಗುತ್ತದೆ. ಆದುದರಿಂದ ಶನಿಯೇ ಈ ರೋಗದ ಕಾರಕನು.

ವಾತದೋಷದ ನಂತರ ಪಿತ್ತ ದೋಷವೂ ಇರುತ್ತದೆ. ಏಕೆಂದರೆ ಈ ರೋಗದಲ್ಲಿ ಜ್ವರದ ತೀವ್ರತೆ ಹೆಚ್ಚಿದ್ದು, ಜ್ವರವು ತುಂಬ ಬರುತ್ತದೆ. ಆದುದರಿಂದ ರವಿಯೂ ಈ ರೋಗದ ಕಾರಕನಿರುವನು. ರವಿ, ಶನಿಯರು ನಿರ್ಬಲರಿರದೆ ಯಾರಿಗೂ ಈ ರೋಗದ ಭೀತಿಯಿರುವದಿಲ್ಲ.

**ಸ್ಥಾನ:** — ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟಸ್ಥಾನವೇ ಈ ರೋಗದ ಕಾರಕವೆಂದು ಹೇಳಲು ಬಾರದು. ಏಕೆಂದರೆ ಇದೊಂದು ಸಾರ್ವದೈಹಿಕ ರೋಗವಿರುವದರಿಂದ ತನುಸ್ಥಾನವನ್ನೇ ನೋಡಬೇಕೆಂದು ನಮಗೆನಿಸುತ್ತದೆ.

ತನುಸ್ಥಾನದ ನಂತರ ಪಂಚಮ ಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಪ್ಲಿಹವೃದ್ಧಿ, ಯಕೃತ್‌ವೃದ್ಧಿ, ಕಾಮಣಿ, ಪಾಂಡುತ, ಉದರ ಮೊದಲಾದ ರೋಗಗಳು ಉಪದ್ರವರೂಪವಾಗಿ ಈ ರೋಗದಲ್ಲಿ ಬರುವ ಸಂಭವವಿದೆ. ಈ ಉಪದ್ರವ ರೋಗಗಳಿಗೆಲ್ಲ ಪಂಚಮಸ್ಥಾನ ಕಾರಕವಿರುವದರಿಂದ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲ ಸಹ ಪರಿಶೀಲಿಸಬೇಕು.

**ಲಗ್ನ:**— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಕರ್ಕ, ಸಿಂಹ, ಕನ್ಯಾ, ಧನು, ಮಕರ, ಕುಂಭ, ಮೀನ ಈ ಲಗ್ನದ ಜನರಿಗೆ ಈ ರೋಗದ ಉಪದ್ರವ ಬಹಳ.

**ರಾಶಿ:** – ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಜಲರಾಶಿಯವರಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರಿಗೆ ಈ ರೋಗದ ಭೀತಿಯು ಬಹಳ. ಜಲರಾಶಿಯ ನಂತರ ವಾಯು ರಾಶಿಯವರಾದ ಮಿಥುನ, ತುಲಾ, ಕುಂಭ ಈ ರಾಶಿಯ ಜನರು ಈ ರೋಗದಿಂದ ಬಳಲುತ್ತಿರುವದು ಕಂಡು ಬಂದಿದೆ.

**ಯೋಗಗಳು:** — ಪಂಚಮಸ್ಥಾನ, ಪಂಚಮೇಶ ಹಾಗೂ ಗುರು ಈ ಮೂರು ಜಾತಕದಲ್ಲಿ ನಿರ್ಬಲವಿದ್ದರೆ ಕಾಮಣಿ, ಪಾಂಡುತ, ಯಕೃತ್ ವೃದ್ಧಿ, ಪ್ಲೀಹವೃದ್ಧಿ, ಉದರ ಮೊದಲಾದವುಗಳು ಉಪದ್ರವರೂಪದಲ್ಲಿ ಬಾಧಿಸುವ ಸಂಭವವಿರುತ್ತದೆ.

## ೧೦. ಟಾಯಫಾಯಿಡ್ (Typhoid)
### (ಆಂತ್ರಿಕ ಸನ್ನಿಪಾತ)

ಟಾಯಫಾಯಿಡ್‌ಕ್ಕೆ ಕಟ್ಟಿನ ಜ್ವರವೆಂತಲೂ, ವಿಷಮಜ್ವರವೆಂತಲೂ, ಮುದ್ದತ್ತಿನ ಜ್ವರವೆಂತಲೂ ಬಳಕೆಯಲ್ಲಿರುವ ಹೆಸರು. ಆದರೆ ಶಾಸ್ತ್ರೀಯ ಭಾಷೆಯಲ್ಲಿ ಹೇಳಬೇಕಾದರೆ "ಆಂತ್ರಿಕ ಸನ್ನಿಪಾತ" ಎಂಬ ಹೆಸರಿರುತ್ತದೆ. ಆಂತ್ರಿಕವೆಂದರೆ "ಸಣ್ಣ ಕರಳು" ಸನ್ನಿಪಾತವೆಂದರೆ "ತ್ರಿದೋಷ". ಆದುದರಿಂದ ಇದೊಂದು ತ್ರಿದೋಷ ದೂಷಿತ ರೋಗವಿದ್ದು, ಆಂತ್ರವು ಪ್ರಧಾನ ದೂಷಿತ ಅವಯವವಿರುತ್ತದೆ.

**ಕಾರಕಗ್ರಹ:—** ಈ ರೋಗದಲ್ಲಿ ಮೂರೂ ದೋಷಗಳೂ ದೂಷಿತವಾಗಿದ್ದರೂ ಜ್ವರವೇ ಪ್ರಾಮುಖ್ಯವಿರುತ್ತದೆ. ಜ್ವರದ ಏರಿಳಿತವೇ ಪ್ರಧಾನ ಲಕ್ಷಣಗಳಲ್ಲಿ ಒಂದಿರುವದರಿಂದ ಪಿತ್ತದೋಷವೇ ಪ್ರಧಾನವಿರುತ್ತದೆ. ಆದುದರಿಂದ ಪಿತ್ತಕಾರಕಗ್ರಹಗಳಾದ ರವಿ, ಮಂಗಳರೇ ಈ ರೋಗದ ಕಾರಕ ಗ್ರಹಗಳು.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಷಷ್ಠ ಸ್ಥಾನವೇ ಮೂಲ ಮತ್ತು ಮುಖ್ಯವಿರುತ್ತದೆ. ಏಕೆಂದರೆ ಸಣ್ಣಕರುಳಿಗೆ ಹುಣ್ಣಾಗಿ ತೂತುಬಿದ್ದು ರೋಗಿ ಕೈಬಿಡುವ ಪ್ರಸಂಗವಿರುತ್ತದೆ. ಮತ್ತು ಕೋಷ್ಠಾಗ್ನಿ ಮಂದವಾಗುವದೇ ಈ ರೋಗದ ಲಕ್ಷಣಗಳಲ್ಲಿ ಒಂದು. ಆದುದರಿಂದ ಕೋಷ್ಠಾಗ್ನಿಯ ಸ್ಥಾನವೂ, ಸಣ್ಣಕರುಳಿನ ಸ್ಥಾನವೂ ಆದ ಷಷ್ಠಸ್ಥಾನವೇ ಈ ರೋಗದ ಕಾರಕಸ್ಥಾನವಿರುತ್ತದೆ. ಷಷ್ಠಸ್ಥಾನ ಮತ್ತು ಷಷ್ಠೇಶ ದೂಷಿತ (ದುರ್ಬಲ) ರಿರದೆ ಯಾರಿಗೂ ಟಾಯಫಾಯಿಡ್ ಬರಲಾರದು.

**ಲಗ್ನ :—** ಈ ರೋಗದಲ್ಲಿ ಕರುಳಿನ ರಾಶಿಯಾದ ಕನ್ಯಾರಾಶಿಯೇ ದೂಷಿತವಿರುತ್ತದೆ. ಆದುದರಿಂದ ಮೇಷ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನಗಳ ಜಾತಕದವರೇ ಈ ರೋಗದಿಂದ ಪೀಡಾಗಿ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟರಾಶಿಯ ಜನರೇ ಈ ರೋಗದಿಂದ ಬಳಲುವರು ಎಂದು ಹೇಳುವದು ಕಠಿಣವಿದ್ದರೂ

ಹೆಚ್ಚಾಗಿ ಭೂರಾಶಿಯ ಜನರಾದ ವೃಷಭ, ಕನ್ಯಾ, ಮಕರ ಈ ರಾಶಿಯ ಜನರಿಗೂ ವಾಯು ರಾಶಿಯವರಾದ ಮಿಥುನ, ತುಲಾ, ಕುಂಭ ಈ ರಾಶಿಯ ಜನರಿಗೂ ಈ ರೋಗದ ಭೀತಿಯು ಬಹಳವಿರುತ್ತದೆ.

## ೧೧. ನಿಮೋನಿಯಾ (Pneumonia)

### ಶ್ಲೇಷ್ಮಕ ಸನ್ನಿಪಾತ

ನಿಮೋನಿಯಾ ಸ್ವತಂತ್ರ ರೋಗವಾಗಿಯೂ ಬರುವದುಂಟು. ಇಲ್ಲವೆ ಗೊಬ್ಬರ, ಮೈಲಿ, ಗಣಜಲಿ, ಪ್ಲೇಗು, ಕ್ಷಯ ಮೊದಲಾದ ರೋಗಗಳಲ್ಲಿ ಉಪದ್ರವ ಅಥವಾ ಲಕ್ಷಣ ರೂಪವಾಗಿ ಬರುವದೂ ಉಂಟು. ಈ ರೋಗಕ್ಕೆ ಆಯುರ್ವೇದ ಶಾಸ್ತ್ರದ ಪ್ರಕಾರ ಶ್ಲೇಷ್ಮಕ ಸನ್ನಿಪಾತವೆಂದು ಕರೆಯಲಾಗುತ್ತದೆ. ಈ ರೋಗದಲ್ಲಿ ಎರಡು ಪ್ರಕಾರಗಳುಂಟು ೧) ಲೋಬರ್ ನಿಮೋನಿಯಾ (Lobar Pneumonia) ೨) ಶ್ವಸನಕ ಸನ್ನಿಪಾತ (Broncho Pneumonia) ಈ ಎರಡೂ ಪ್ರಕಾರದ ರೋಗಗಳಿಗೆ ಕಾರಕಲಗ್ನ, ರಾಶಿ, ಸ್ಥಾನಗಳಲ್ಲಿಯೂ ವಿಭಿನ್ನತೆಯಿದ್ದು ಅದನ್ನು ಈ ಕೆಳಗಿನಂತೆ ಕೊಡಲಾಗಿದೆ.

**ಕಾರಕಗ್ರಹ :—** ರೋಗದ ಹೆಸರೇ ಸೂಚಿಸುವಂತೆ "ಶ್ಲೇಷ್ಮಕ ಸನ್ನಿಪಾತ", ಇದು ಕಫಪ್ರಧಾನ ದೂಷಿತವಿರುವದರಿಂದ ಚಂದ್ರನೇ ಈ ರೋಗದ ಕಾರಕನು.

ನಿಮೋನಿಯಾದಲ್ಲಿ ಪ್ರಾಣವಾಯು ದೂಷಿತವಿರುವದರಿಂದ ರೋಗಿಗೆ ಉಸಿರಾಡಿಸುವದೂ ಸಹ ಕಷ್ಟವಾಗಿರುವದರಿಂದ ವಾತದೋಷವು ಕೆಲಮಟ್ಟಿಗೆ ಇರುತ್ತದೆ. ಆದುದರಿಂದ ಶನಿ ಬುಧರು ಕೆಲಮಟ್ಟಿಗೆ ಕಾರಕರು. ಜ್ವರವಂತೂ ಇದ್ದೇ ಇರುವದರಿಂದ ಪಿತ್ತದೋಷ ಕೆಲಮಟ್ಟಿಗೆ ಇರುತ್ತದೆ. ಆದುದರಿಂದ ರವಿಯೂ ಕಾರಕನಾಗುವನು.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಕಫದೋಷ ಪ್ರಧಾನವಿರುವದರಿಂದಲೂ, ಕಫಸ್ಥಾನಗಳಾದ ಪುಪ್ಪುಸ, ಎದೆ, ಕಂಠ, ಹೃದಯ ಇವುಗಳಲ್ಲಿ ದೋಷವಿರುವದರಿಂದಲೂ ದ್ವಿತೀಯ, ಚತುರ್ಥ ಈ ಸ್ಥಾನಗಳೇ ಕಾರಕವಾಗುತ್ತವೆ.

**ಕಾರಕಲಗ್ನ :—** ಪುಪ್ಪುಸದ ಮೇಲೆ ಕಫದೋಷದಿಂದ ಪುಪ್ಪುಸಾವರಣ ಆಗುವದೇ ಮುಖ್ಯ ಲಕ್ಷಣವಿರುತ್ತದೆ. ಮಿಥುನ ರಾಶಿಯ ಪ್ರಭಾವವು

ಪುಪ್ಪುಸದ ಮೇಲೆ ಇರುತ್ತದೆ. ಆದ್ದರಿಂದ ಮಿಥುನ ರಾಶಿ ದೂಷಿತವಿರದೆ ಯಾರಿಗೂ ನಿಮೋನಿಯಾ ಬರಲಾರದು. ಅದರಲ್ಲಿಯೂ ಶ್ವಸನಕ ಸನ್ನಿಪಾತ (Broncho Pneumonia) ದಲ್ಲಿ ಪುಪ್ಪುಸದೋಷವು ಪ್ರಾಮುಖ್ಯ ಲಕ್ಷಣ ಗಳಲ್ಲಿ ಒಂದಾಗಿರುತ್ತದೆ. ಆದ್ದರಿಂದ ಮಿಥುನ, ಕರ್ಕ, ವೃಶ್ಚಿಕ, ಮಕರ, ಮೀನ ಈ ಲಗ್ನದ ಜಾತಕನು ಬ್ರಾಂಕೋ ನಿಮೋನಿಯಾದಿಂದ ಬಳಲುವದು ಕಂಡುಬಂದಿದೆ.

ಎದೆಯಲ್ಲಿ ಕಫ ಪ್ರಕೋಪವಾಗಿ ಎದೆನೋವು, ಕೆಮ್ಮು, ನೆಗಡಿ ಮೊದ ಲಾದ ವಿಕೃತಗಳು ಲೋಬರ್ ನಿಮೋನಿಯಾದಲ್ಲಿ ಲಕ್ಷಣವಿರುವದರಿಂದ ಚತುರ್ಥಸ್ಥಾನವೇ ದೂಷಿತವಿರುತ್ತದೆ. ಕರ್ಕ ರಾಶಿಯ ಪ್ರಭಾವವು ವಕ್ಷದ ಮೇಲೆ ಇರುತ್ತದೆ. ಆದುದರಿಂದ ಮೇಷ, ಸಿಂಹ, ಧನು, ಕುಂಭ ಈ ಲಗ್ನದ ಜಾತಕರು ಲೋಬರ್ ನಿಮೋನಿಯಾದಿಂದ ಬಳಲುವದು ಕಂಡುಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಇದು ಕಫ ಪ್ರಧಾನ ರೋಗವಿರುವದರಿಂದ ಜಲರಾಶಿಯವರಾದ ಕರ್ಕ, ವೃಶ್ಚಿಕ, ಮೀನ ಈ ರಾಶಿ ಯವರಿಗೆ ಇದರ ಬಾಧೆ ಹೆಚ್ಚಾಗಿರುತ್ತದೆ. ಜಲರಾಶಿಯವರ ನಂತರ ವಾಯು ರಾಶಿಯವರಾದ ಮಿಥುನ, ತುಲಾ, ಕುಂಭ ಈ ರಾಶಿಯವರು ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ಯೋಗಗಳು :—** ದ್ವಿತೀಯೇಶ, ಚತುರ್ಥೇಶ ದುರ್ಬಲರಿದ್ದು, ದ್ವಿತೀಯ, ಚತುರ್ಥ ಈ ಸ್ಥಾನಗಳಲ್ಲಿ ಅನೇಕ ಗ್ರಹಗಳಿದ್ದ ಅಥವಾ ವಿರುದ್ಧ ಗುಣಧರ್ಮಗಳಿದ್ದ ಜಾತಕನಿಗೆ ಈ ರೋಗದ ಭೀತಿ ಬಹಳ. ೨) ಚಂದ್ರನು ದ್ವಿತೀಯ ಇಲ್ಲವೆ ಚತುರ್ಥದಲ್ಲಿದ್ದು. ಶನಿಯಿಂದ ಈಕ್ಷಿಸಲ್ಪಟ್ಟ ಜಾತಕನಿದ್ದರೆ ಈ ರೋಗದ ಭೀತಿ ಬಹಳ ಇರುವದು.

## ೧೨. ಇನ್‌ಫ್ಲುಯೆಂಝಾ (Influenza)

ಇನ್‌ಫ್ಲುಯೆಂಝಾಕ್ಕೆ ಸಂಕ್ಷಿಪ್ತದಲ್ಲಿ ಫ್ಲ್ಯೂ ಎಂತಲೂ, ಗ್ರಾಮ್ಯ ಭಾಷೆ ಯಲ್ಲಿ ಗುದ್ದವ್ವನ ಬೇನೆಯೆಂತಲೂ ಶಾಸ್ತ್ರೀಯ ಭಾಷೆಯಲ್ಲಿ ವಾತೋಲ್ಬಣ ಜ್ವರ ಅಥವಾ ಆಗಂತುಕ ವಾತ–ಕಫ ಜ್ವರ ಎಂತಲೂ ಕರೆಯುತ್ತಾರೆ.

**ಕಾರಕಗ್ರಹ:—** ಈ ರೋಗವು ವಾತ–ಕಫ ದೂಷಿತವಿದ್ದರೂ, ಕಫಕ್ಕಿಂತ ವಾತದೋಷದ ಅಂಶವೇ ಅಧಿಕವಿರುತ್ತದೆ. ಅಂತೆಯೇ ತಲೆಶೂಲೆ, ಮೈ–ಕೈ ನೋವು, ಸಂದು–ಸಂದುಗಳಲ್ಲಿ ಹೊಡೆತ, ನಿದ್ರಾನಾಶ ಮೊದಲಾದ ಶೂಲಪ್ರಧಾನವಿರುವದರಿಂದ ಶನಿಯೇ ಈ ರೋಗದ ಮೂಲ ಹಾಗೂ ಮುಖ್ಯ ಕಾರಕಗ್ರಹನು.

ಶನಿಯ ತರುವಾಯ ಚಂದ್ರನೂ ಈ ರೋಗದ ಕಾರಕನು. ಏಕೆಂದರೆ ನೆಗಡಿ, ಸೀನು, ಕೆಮ್ಮು ಮೊದಲಾದವುಗಳಿಂದ ಈ ರೋಗ ಪ್ರಾರಂಭವಾಗುವದರಿಂದ ಚಂದ್ರನು ಕಾರಕನಾಗುವನು.

**ಸ್ಥಾನ:—**ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪ್ರಥಮ, ದ್ವಿತೀಯ ಸ್ಥಾನಗಳೇ ಈ ರೋಗದ ಕಾರಕಸ್ಥಾನಗಳು. ಏಕೆಂದರೆ ಶಿರಶೂಲೆ ಪ್ರಧಾನವಿದ್ದು, ಸರ್ವಾಂಗ ಶೂಲ, ಘ್ರಾಣೇಂದ್ರಿಯಲ್ಲಿ ದೋಷವಿರುವದರಿಂದ ತನುಸ್ಥಾನವೂ ಕಂಠಸ್ಥಾನದಲ್ಲಿ ದೋಷ, ಶ್ವಸನನಲಿಕೆ, ಗಂಟಲದಲ್ಲಿ ವಿಕೃತಿ, ಕೆಮ್ಮುಪ್ರಧಾನ ಈ ಲಕ್ಷಣವಿರುವದರಿಂದಲೂ ದ್ವಿತೀಯ ಸ್ಥಾನವೂ ಕಾರಕವಿರುತ್ತದೆ.

**ಲಗ್ನ :—** ಶ್ವಸನನಲಿಕೆ ಹಾಗೂ ಗಂಟಲು ಇವುಗಳ ಮೇಲೆ ವೃಷಭರಾಶಿಯ ಪ್ರಭಾವವಿರುವದರಿಂದ ಜಾತಕದಲ್ಲಿ ವೃಷಭರಾಶಿ ದೂಷಿತವಿರದೆ ಈ ರೋಗ ಬರಲಾರದು. ಶಿರಸ್ಸಿನ ಮೇಲೆ ಮೇಷರಾಶಿಯ ಪ್ರಭಾವವಿರುವದರಿಂದ ಮೇಷರಾಶಿಯು ದೂಷಿತವಾಗಿರುತ್ತದೆ. ಆದುದರಿಂದ ಮೇಷ, ವೃಷಭ, ಮಿಥುನ, ಕನ್ಯಾ, ತುಲಾ, ವೃಶ್ಚಿಕ, ಧನು ಈ ಲಗ್ನದವರೇ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಕಫ, ವಾತ ಪ್ರಕೃತಿಯವರಿಗೆ ಈ ರೋಗ ಹೆಚ್ಚು ಬಾಧಿಸುತ್ತದೆ. ಪಿತ್ತಪ್ರಕೃತಿಯವರಿಗೆ ತೊಂದರೆ ಕಡಿಮೆ. ಆದುದರಿಂದ ಮಿಥುನ, ತುಲಾ, ಕುಂಭ, ರಾಶಿಯ ಜನರೂ ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರೂ ಹೆಚ್ಚು ಬಳಲುವದು ಕಂಡುಬಂದಿದೆ.

## ವಿಸ್ಫೋಟಕ ಜ್ವರಗಳು (Erruptive Fever)

ಮೈಮೇಲೆ ಬೊಕ್ಕೆ ಏಳುವದರ ಮೂಲಕ ಜ್ವರ ಬರುವ ಕಾರಣಮೈಲಿ,

ರಾಶಿ :— ಈ ರೋಗ ಹೆಚ್ಚಾಗಿ ಬೇಸಿಗೆಯ, ಕೊನೆ ಹಾಗೂ ಮಳೆ ಗಾಲದ ಪ್ರಾರಂಭದಲ್ಲಿ ಆಗುವದರಿಂದ ವೃಷಭ, ಕರ್ಕ, ವೃಶ್ಚಿಕ, ಮೀನ, ತುಲಾ, ಮಿಥುನ ಈ ರಾಶಿಯವರೇ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

## ೧೫. ಕಾಲರಾ, ಮಾರಿಬೇನೆ (Cholera)

### ವಿಷೂಚಿಕಾ

ಕೆಲವೇ ಘಂಟೆಗಳಲ್ಲಿ ಮನುಷ್ಯರನ್ನು ಕೊಲ್ಲುವ ಭಯಾನಕವಾದ ಈ ಅಂಟುರೋಗ ಪಿಡುಗಿನ ರೂಪದಲ್ಲಿ ಬರುತ್ತದೆ. ಈ ರೋಗದ ಉಪದ್ರವ ಹೆಚ್ಚಾಗಿ ಮಳೆಗಾಲದ ಪ್ರಾರಂಭದಲ್ಲಿ ಬಹಳ.

ಕಾರಕಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಅಷ್ಟಮ ಸ್ಥಾನವೇ ಈ ರೋಗದ ಮೂಲ ಹಾಗೂ ಮುಖ್ಯ ಸ್ಥಾನವಿರುತ್ತದೆ. ಏಕೆಂದರೆ ಅಷ್ಟಮ ಸ್ಥಾನವಿದು ತೀವ್ರ ಮಾರಣಸೂಚಕ ಸ್ಥಾನವಿರುತ್ತದೆ. ಇದಲ್ಲದೆ ಮೂತ್ರ ವಿಸರ್ಜನಾ ಸ್ಥಾನವೂ ಇರುತ್ತದೆ. ಕಾಲರಾದಲ್ಲಿ ಮೂತ್ರವಿಸರ್ಜನ ಕ್ರಿಯೆಯು ದೂಷಿತವಿರುವದಲ್ಲದೆ ಮೂತ್ರ ಆಗದಿರುವದೂ ಒಂದು ಮುಖ್ಯ ಲಕ್ಷಣ.

ಅಷ್ಟಮಸ್ಥಾನವು ಗುದಸ್ಥಾನವೂ ಮಲವಿಸರ್ಜನ ಸ್ಥಾನವೂ ಇರುತ್ತದೆ. ಕಾಲರಾದಲ್ಲಿ ಬೇಧಿಯು ಮೇಲಿಂದ ಮೇಲೆ ಆಗುವದೇ ಮುಖ್ಯ.

ಅಷ್ಟಮಸ್ಥಾನದ ನಂತರ ಷಷ್ಠ, ಪಂಚಮ ಸ್ಥಾನಗಳನ್ನೂ ಪರಿಶೀಲಿಸ ಬೇಕು. ಷಷ್ಠಸ್ಥಾನವು ಕೋಷ್ಠಾಗ್ನಿ ಸ್ಥಾನವಿರುತ್ತದೆ. ಕೋಷ್ಠಾಗ್ನಿ ಪ್ರದೀಪ್ತ, ಪ್ರಜ್ವಲಿತವಿದ್ದ ಜಾತಕನಿಗೆ ಕಾಲರಾ ಬರುವದೇ ಅಸಂಭವಿರುತ್ತದೆ.

ಪಂಚಮಸ್ಥಾನವಿದು ಆಮಾಶಯ ಸ್ಥಾನವಿರುತ್ತದೆ. ಕಾಲರಾದಲ್ಲಿ ಆಮಾಶಯದಲ್ಲಿ ದೋಷವಿರುತ್ತದೆ. ಆದುದರಿಂದ ಅಷ್ಟಮ, ಷಷ್ಠ, ಪಂಚಮ ಈ ಸ್ಥಾನಗಳೂ ಮತ್ತು ಈ ಸ್ಥಾನಾಧೀಶರೂ ದೂಷಿತವಿರದೆ ಯಾರಿಗೂ ಕಾಲರಾ ಬರಲಾರದು.

**ಕಾರಕಗ್ರಹ:**—ಈ ರೋಗ ತಗಲಿದಾಗ ರೋಗಿಯ ದೇಹಸ್ಥಿತಿ ಕ್ರಮೇಣ ತಣ್ಣಗಾಗುತ್ತ ಹೋಗುವದು, ಅರ್ಥಾತ್ ಜಲಾಂಶಭಾಗ ಕಡಿಮೆಯಾಗುತ್ತದೆ. ಹೀಗಾಗಿ ಕಫವೇ ಪ್ರಧಾನ ದೋಷವಿರುತ್ತದೆ. ಆದುದರಿಂದ ಚಂದ್ರನೇ ಈ ರೋಗದ ಕಾರಕನು.

ಈ ರೋಗವಾದಾಗ ಸೂಜಿ ಚುಚ್ಚಿದಂತೆ ಶೂಲವಿರುತ್ತದೆ ಕೈ, ಕಾಲು, ಹೃದಯ, ಹೊಟ್ಟೆಗಳಿಗೆ ವರಟೆಗಳು ಬರುತ್ತವೆ. ಶೂಲ–ವರಟೆ ಇವು ವಾತ ದೋಷದ ಲಕ್ಷಣವಿರುವದರಿಂದ ಶನಿಯೂ ಈ ರೋಗದ ಕಾರಕನು.

**ಕಾರಕಲಗ್ನ:**— ಕರ್ಕ, ಕನ್ಯಾ, ತುಲಾ, ಕುಂಭ, ಮೇಷ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡು ಬಂದಿದೆ.

**ರಾಶಿ :**— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರು ಎಂದು ಹೇಳುವದು ಕಠಿಣ. ಆದರೂ ಪಚನಕ್ರಿಯೆಯಲ್ಲಿ ದೂಷಿತರಿರುವ ಹಾಗೂ ಯಾವಾಗಲೂ ತಿನಿಸುಬಡಕರಿರುವ ಜನರಿಗೆ ಉಪದ್ರವ ಬಹಳವಿರುವದರಿಂದ ವೃಷಭ, ಕನ್ಯಾ, ಮಕರ, ವೃಶ್ಚಿಕ, ಕರ್ಕ, ಸಿಂಹ, ಧನು ಈ ರಾಶಿಯವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

## ೧೬. ಪ್ಲೇಗ (Plague)

## ಗ್ರಂಥಿಕ ಸನ್ನಿಪಾತ

ಕಾಲರಾದಂತೆ ಇದಾದರೂ ಭಯಾನಕ ರೋಗವಿದ್ದು, ತೀವ್ರ ಮರಣ ತರುವ ರೋಗವಿರುತ್ತದೆ. ಉಷ್ಣಕಟಬಂಧದಲ್ಲಿ ಇದರ ಹಾವಳಿ ಬಹಳ.

**ಕಾರಕ ಗ್ರಹ:**— ತೀವ್ರ ಜ್ವರ ಹಾಗೂ ಗ್ರಂಥಿಗಳೇ (ಗಂಟು) ಪ್ರಧಾನ ಲಕ್ಷಣವಿರುವದರಿಂದ ಪಿತ್ತದೋಷವೇ ಮುಖ್ಯವಿರುತ್ತದೆ. ಗ್ರಂಥಿ, ವ್ರಣ, ಶೋಥ, ದಾಹ, ಜ್ವರ, ಪ್ರಲಾಪ ಈ ಎಲ್ಲ ಗುಣಗಳ ಕಾರಕನಾದ ಮಂಗಳನೇ ಈ ರೋಗದ ಕಾರಕನು.

**ಸ್ಥಾನ:**— ತೀವ್ರ ಮರಣಸೂಚಕ ಸ್ಥಾನವಾದ ಅಷ್ಟಮ ಸ್ಥಾನವೇ ಈ ರೋಗದ ಮೂಲ ಹಾಗೂ ಮುಖ್ಯ ಸ್ಥಾನವಾಗಿರುತ್ತವೆ. ಏಕೆಂದರೆ ಈ

ಗೊಬ್ಬರ, ಗಣಜಲಿ ಮೊದಲಾದವುಗಳಿಗೆ ವಿಸ್ಫೋಟಕ ಜ್ವರಗಳೆನ್ನುವರು. ಫಲಜ್ಯೋತಿಷ್ಯದಿಂದ ಈ ವಿಸ್ಫೋಟಕ ಜ್ವರದ ಕಾರಕ ಲಗ್ನ, ರಾಶಿ, ಸ್ಥಾನಗಳು ಯಾವವು ಎಂಬುದನ್ನು ಪರಿಶೀಲಿಸೋಣ.

## ೧೩. ಮೈಲಿಬೇನೆ (Small Pox)

ಇದೊಂದು ಹಿಡುಗಿನಿಂದ ಬರುವ ಸಾಂಸರ್ಗಿಕ ರೋಗವಿರುತ್ತದೆ. ಆಯುರ್ವೇದ ಶಾಸ್ತ್ರದ ಪ್ರಕಾರ ಜನಪದ ಧ್ವಂಸದಿಂದ ಬರುತ್ತದೆ ಎಂದು ಹೇಳಲಾಗಿದೆ. ಹೆಚ್ಚಾಗಿ ಚಿಕ್ಕ ಮಕ್ಕಳಿಗೆ ಇದರ ಉಪದ್ರವ ಬಹಳ. ಕೆಲವೊಮ್ಮೆ ದೊಡ್ಡವರಿಗೂ ಬರುವ ಸಂಭವವಿರುತ್ತದೆ. ಒಂದು ಸಲ ಬಂದು ಹೋದರೆ ಸಾಮಾನ್ಯವಾಗಿ ತಿರುಗಿ ಏಳುವದಿಲ್ಲ.

**ಕಾರಕಗ್ರಹ**:— ಈ ರೋಗದಲ್ಲಿ ರಕ್ತದ ದೋಷವಿದ್ದು, ಜ್ವರ ಪ್ರಧಾನವಿರುತ್ತದೆ. ಮೈಮೇಲಿ ಬೊಕ್ಕೆಗಳು ಏಳುವದೂ ಮುಖ್ಯ ಲಕ್ಷಣಗಳಲ್ಲಿ ಒಂದು. ಆದ್ದರಿಂದ ಇದು ಪಿತ್ತಪ್ರಧಾನದೂಷಿತ ರೋಗವಿರುತ್ತದೆ. ಆದ್ದರಿಂದ ಮಂಗಳನೇ ಈ ರೋಗದ ಕಾರಕನು. ಏಕೆಂದರೆ ಬಾವು, ಬೊಕ್ಕೆ, ದಾಹ, ಜ್ವರ ಇವು ಮಂಗಳನ ಗುಣಧರ್ಮದ ಲಕ್ಷಣಗಳು. ಇದಲ್ಲದೆ ಈ ರೋಗ ಭಯಾನಕವಿದ್ದು, ಬೊಕ್ಕೆಗಳ ಪ್ರಸರಣದಿಂದ ಕಿವುಡತನ, ಕುರುಡತನ ಮೊದಲಾದ ಅಂಗವಿಕೃತಿಗಳೂ ಉಂಟಾಗುತ್ತವೆ. ಆಕಸ್ಮಿಕ ಅಂಗ ವಿಕೃತಿಯು ಮಂಗಳನ ಗುಣಧರ್ಮವೂ ಇರುತ್ತದೆ.

ಮಂಗಳನ ತರುವಾಯ ಬುಧನೂ ಈ ರೋಗದ ಕಾರಕನು. ಏಕೆಂದರೆ ಈ ರೋಗದ ಬಾಧೆಯು ತ್ವಚೆಯ ಮೇಲೆ ಇರುತ್ತದೆ. ಬುಧನು ತ್ವಚೆಯ ಅಧಿಪತಿಯು.

**ಸ್ಥಾನ**:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ರೋಗವು ಸರ್ವಾಂಗದೂಷಿತ— ಅದರಲ್ಲಿಯೂ ರಕ್ತ–ತ್ವಚೆಗಳು ವಿಶೇಷವಾಗಿ ದೂಷಿತ ವಿರುತ್ತದೆ. ಆದುದರಿಂದ ತನುಸಾನ್ಥವೇ ಈ ರೋಗದ ಕಾರಕಸ್ಥಾನ ವಿರುತ್ತದೆ.

**ಲಗ್ನ**:— ಭೂ ತತ್ತ್ವದ ರಾಶಿಗಳಾದ ವೃಷಭ, ಕನ್ಯಾ, ಮಕರ ಇವುಗಳ ಪ್ರಭಾವವು ತ್ವಚೆಯ ಮೇಲೆ ಇರುತ್ತದೆ. ಆದುದರಿಂದ ವೃಷಭ,

ಕನ್ಯಾ, ತುಲಾ, ಮಕರ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲು ವದು ಕಂಡುಬಂದಿದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಸಾಂಸರ್ಗಿಕ ಕ್ರಿಯೆಯು ಜಲರಾಶಿಯಲ್ಲಿರುವದರಿಂದ ಕರ್ಕ, ವೃಶ್ಚಿಕ, ಮೀನ ಈ ರಾಶಿಯ ಜನರಿಗೇ ಈ ರೋಗದ ಭೀತಿ ಬಹಳ. ಜಲರಾಶಿಯ ನಂತರ ವಾಯು ರಾಶಿಯವರಾದ ಮಿಥುನ, ತುಲಾ, ಕುಂಭ ಈ ರಾಶಿಯವರೂ ಹೆಚ್ಚಾಗಿ ಬಳಲು ವದು ಕಂಡುಬಂದಿದೆ.

## ೧೪. ಗೊಬ್ಬರ (Measles)

**ಕಾರಕಗ್ರಹ :—** ಈ ರೋಗವು ನೆಗಡಿಯಿಂದ ಪ್ರಾರಂಭವಾಗುವದರಿಂದಲೂ ನಿಮೋನಿಯಾ ಮೊದಲಾದವು ಉಪದ್ರವ ರೂಪದಿಂದ ಬರುವದರಿಂದಲೂ, ಕಫದೋಷಪ್ರಧಾನವಿರುತ್ತದೆ. ಆದುದರಿಂದ ಚಂದ್ರನೇ ಈ ರೋಗದ ಕಾರಕನು.

ಜ್ವರವಂತೂ ಪ್ರಧಾನ ಲಕ್ಷಣ; ಪಿತ್ತದೋಷವೂ ಕೆಲಮಟ್ಟಿಗೆ ಇರುತ್ತದೆ. ಆದುದರಿಂದ ಮಂಗಳನೂ ಈ ರೋಗದ ಕಾರಕನು. ಅಂತೆಯೇ ಈ ರೋಗಕ್ಕೆ ಕಫ-ಪಿತ್ತದೂಷಿತರೋಗವೆನ್ನುವರು.

ತ್ವಚೆಯ ಮೇಲೆ ಬುಧನ ಪ್ರಭಾವವಿರುವದರಿಂದ ಬುಧನೂ ಕೆಲ ಮಟ್ಟಿಗೆ ಕಾರಕನಾಗುವನು.

**ಲಗ್ನ :—** ವೃಷಭ, ಕನ್ಯಾ, ತುಲಾ, ಮಕರ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ. ಇವುಗಳ ನಂತರ ಮೇಷ, ಕರ್ಕ, ವೃಶ್ಚಿಕ ಈ ಲಗ್ನದವರೂ ಹೆಚ್ಚಾಗಿ ಬಳಲುವರು.

**ಸ್ಥಾನ :—** ಇದೊಂದು ಸಾರ್ವದೈಹಿಕ ರೋಗವಿರುವದರಿಂದ ತನು ಸ್ಥಾನವೇ ಈ ರೋಗದ ಕಾರಕಸ್ಥಾನವು. ತನುಸ್ಥಾನದ ನಂತರ ದ್ವಿತೀಯ ಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಶ್ವಸನನಲಿಕೆಯಲ್ಲಿ ಬಾವು ಬರುವಿಕೆ, ನಿಮೋನಿಯಾ ಮೊದಲಾದವು ಉಪದ್ರವ ರೂಪದಲ್ಲಿ ಬರುವದರಿಂದ ದ್ವಿತೀಯ ಸ್ಥಾನವೂ ದೂಷಿತವಿರುತ್ತದೆ.

**ಕಾರಕಲಗ್ನ**:— ಮೇಷ, ವೃಷಭ, ಕರ್ಕ, ಕನ್ಯಾ, ಧನು ಈ ಲಗ್ನದ ವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ. ತದನಂತರ ಮಿಥುನ, ವೃಶ್ಚಿಕ, ಮೀನ ಈ ಲಗ್ನದವರೂ ಸಹ ಈ ರೋಗಿದಿಂದ ಬಳಲುವದು ಕಂಡುಬಂದಿದೆ.

**ರಾಶಿ** :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟವಾದ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳಲು ಬಾರದು. ಅನಿಯಮಿತವಾಗಿ ಊಟಮಾಡುವ, ಅನಿಯಮಿತವಾಗಿ ನಿದ್ರಿಸುವ, ಮೇಲಿಂದ ಮೇಲೆ ಜಾಗರಣೆ ಮಾಡುವ, ಸತತ ಪ್ರವಾಸ ಮಾಡುವ, ಚಹಾ, ಕಾಫಿ, ಮದ್ಯ ಯಾವಾಗಲೂ ಬಹಳ ಪ್ರಮಾಣದಲ್ಲಿ ಸೇವಿಸುವ ಜನರಿಗೂ ಇದರ ಉಪದ್ರವ ಬಹಳ. ಡ್ರೈವರ್, ಕಂಡಕ್ಟರ್, ಗಾರ್ಡ್, ಟಿಕೆಟ್ ಚೆಕ್ಕರ್, ಇನಸ್ಪೆಕ್ಟರ್ ಮೊದಲಾದ (Outdoor Executive work) ಓಡಾಡಿ ಕೆಲಸ ಮಾಡುವ ಜನರಿಗೆ ಇದರ ಭೀತಿ ಬಹಳ. ಇನ್ನು ರಾಶಿಯ ದೃಷ್ಟಿಯಿಂದ ಹೇಳಬೇಕಾದರೆ ಪಿತ್ತಪ್ರಕೃತಿಯ ರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿಗೂ, ಭೂ ರಾಶಿಯ ಜನರಾದ ವೃಷಭ, ಕನ್ಯಾ, ಮಕರ ಈ ರಾಶಿಯವರಿಗೂ ಇದರ ಉಪದ್ರವ.

## ೧೯. ಆಮಾಶಯಗತ ವ್ರಣ (Peptic ulcer) (ಪೆಪ್ಟಿಕ್ ಅಲ್ಸರ)

ಆಮ್ಲಪಿತ್ತದ ಉಪೇಕ್ಷೆ ಮಾಡುವದರಿಂದ ಈ ರೋಗ ಬರುತ್ತದೆ. ಆದುದರಿಂದ ಆಮ್ಲಪಿತ್ತದ ಕಾರಕಗ್ರಹ ಲಗ್ನ ಸ್ಥಾನಾದಿಗಳೇ ಈ ರೋಗದ ಕಾರಕವಿರುತ್ತವೆ. ಇದಲ್ಲದೆ ಮಾತ್ರೆ ಕೆಲ ಗ್ರಹ, ರಾಶಿ, ಸ್ಥಾನಾದಿಗಳೂ ಉಂಟು.

**ಕಾರಕಗ್ರಹ** :— ಆಮ್ಲಪಿತ್ತವನ್ನು ಉಪೇಕ್ಷಿಸುವದರಿಂದ ಆಮಾಶಯದಲ್ಲಿ ವ್ರಣವಾಗುವದೇ ಈ ರೋಗದ ಮುಖ್ಯ ಲಕ್ಷಣವಾಗಿದೆ. ಆಮಾಶಯದಲ್ಲಿ ವ್ರಣವನ್ನುಂಟುಮಾಡುವ ಗ್ರಹವೆಂದರೆ ರಾಹು, ಚಂದ್ರರು. ಆದ್ದರಿಂದ ರಾಹು–ಚಂದ್ರರೇ ಈ ರೋಗದ ಕಾರಕರು. ಪಿತ್ತಪ್ರಧಾನ ದೋಷವಿರುವದರಿಂದ ರವಿ–ಮಂಗಳರು ಕಾರಕರಿದ್ದೇ ಇರುತ್ತಾರೆ.

**ಕಾರಕಸ್ಥಾನ:**— ಆಮಾಶಯದಲ್ಲಿ ಮತ್ತು ಹೊಟ್ಟೆಯಲ್ಲಿ ದೋಷ ವಿರುವದರಿಂದ ಪಂಚಮಸ್ಥಾನವೇ ಈ ರೋಗದ ಕಾರಕಸ್ಥಾನ.

**ಕಾರಕಲಗ್ನ ಹಾಗೂ ರಾಶಿ:**— ಆಮ್ಲಪಿತ್ತದ ಕಾರಕಲಗ್ನ, ರಾಶಿ ಗಳೇ ಈ ರೋಗಕ್ಕೂ ಕಾರಕವಿರುತ್ತದೆ.

## ೨೦. ಆಂತ್ರಿಕದಲ್ಲಿಯ ವೃಣ (Duodenal ulcer) (ಡಿಯೊಡಿನಲ್ ಅಲ್ಸರ)

ಆಮ್ಲಪಿತ್ತವನ್ನು ಉಪೇಕ್ಷೆ ಮಾಡುವದರಿಂದ ಈ ರೋಗ ಬರುತ್ತವೆ. ಆದ್ದರಿಂದ ಆಮ್ಲಪಿತ್ತದ ಕಾರಕಲಗ್ನ, ರಾಶಿ, ಗ್ರಹ ಸ್ಥಾನಾದಿಗಳ ಹೊರ ತಾಗಿ ಮತ್ತೆ ಕೆಲವು ಯೋಗಗಳನ್ನು ಇಲ್ಲಿ ವಿವರಿಸಲಾಗಿದೆ.

**ಕಾರಕಗ್ರಹ:**— ಆಮ್ಲಪಿತ್ತದ ಕಾರಕಗಳಾದ ರವಿ, ಮಂಗಳರೇ ಈ ರೋಗದ ಕಾರಕಗ್ರಹಗಳು.

**ಕಾರಕಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಷಷ್ಠ ಸ್ಥಾನವೇ ಈ ರೋಗದ ಕಾರಕಸ್ಥಾನವು. ಏಕೆಂದರೆ ಸಣ್ಣಕರುಳಿನ ಮೇಲಿನ ಭಾಗದಲ್ಲಿ ವೃಣವಾಗುವದೇ ಈ ರೋಗದ ಲಕ್ಷಣವಿರುತ್ತದ.

ಷಷ್ಠಸ್ಥಾನದ ನಂತರ ಪಂಚಮ ಸ್ಥಾನವು ಈ ರೋಗದ ಕಾರಕಸ್ಥಾನವು. ಏಕೆಂದರೆ ದೋಷವಿರುವದು ಷಷ್ಠಸ್ಥಾನದಲ್ಲಿದ್ದರೂ, ಹೊಟ್ಟೆಶೂಲೆ ಮೊದ ಲಾದ ವಿಕಾರಗಳಿಂದ ವ್ಯಕ್ತವಾಗುವದು ಪಂಚಮ ಸ್ಥಾನದ ಮೇಲಿಂದ. ಇದ ಲ್ಲದೆ ಪಂಚಮ ಸ್ಥಾನವಿದು ಆಮ್ಲಪಿತ್ತದ ಕಾರಕಸ್ಥಾನವೂ ಇರುತ್ತದೆ. ಆದ್ದ ರಿಂದ ಪಂಚಮ-ಷಷ್ಠಸ್ಥಾನಗಳೂ ಈ ಸ್ಥಾನಾಧೀಶರೂ ದೂಷಿತರಿರದೆ ಈ ರೋಗ ಬರಲಾರದು.

**ಕಾರಕಲಗ್ನ:**— ಮೇಷ, ವೃಷಭ, ಕರ್ಕ, ವೃಶ್ಚಿಕ, ಧನು ಈ ಲಗ್ನ ದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ:** — ಆಮ್ಲಪಿತ್ತದ ಕಾರಕರಾಶಿಯವರೇ ಈ ರೋಗಕ್ಕೆ ಈಡಾ ಗುತ್ತಾರೆ.

ರೋಗದಲ್ಲಿ ರೋಗಿಯು ಏಳು ದಿವಸದಲ್ಲಿ ಗುಣ ಹೊಂದುವನು, ಇಲ್ಲವೆ ಮರಣ ಹೊಂದುವನು. ಆದುದರಿಂದ ಅಷ್ಟಮೇಷ ಹಾಗೂ ಅಷ್ಟಮ ಸ್ಥಾನ ದೂಷಿತರಿರದೆ ಯಾರೂ ಈ ರೋಗದಿಂದ ಸಾಯಲಾರರು.

**ಕಾರಕಲಗ್ನ:—** ಗಂಟುಗಳು ಹೆಚ್ಚಾಗಿ ಗಜ್ಜೆ, ಬಗಲು, ಕುತ್ತಿಗೆಯಲ್ಲಿ ಏಳುವದರಿಂದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವುದು ಕಂಡುಬಂದಿದೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರಿಗೇ ಈ ರೋಗ ಬರುತ್ತದೆ ಎಂದು ಹೇಳಲು ಬಾರದು.

## ೧೭. ಅಪೆಂಡಿಸೈಟಿಸ್ (Appendicitis)
## ಆಂತ್ರ ಪುಚ್ಛಶೋಥ

ಸಾಮಾನ್ಯವಾಗಿ ಈ ರೋಗದ ಉಪದ್ರವವೂ ಮಧ್ಯಮ ವಯಸ್ಸಿನ ಜನರಿಗೂ ಕಿಶೋರಾವಸ್ಥೆಯಲ್ಲಿರುವ ಮಕ್ಕಳಿಗೂ ಬಹಳ,

**ಕಾರಕಗ್ರಹ:** ಅಗ್ನಿಮಾಂದ್ಯ, ಅಜೀರ್ಣ, ಅಪಚನ, ಮಲಬದ್ಧತೆ ಮೊದಲಾದ ಕಾರಣಗಳಿಂದಲೂ ಆಕಸ್ಮಿಕವಾಗಿ ಅಪಘಾತಾದಿಗಳಿಂದ ಕರುಳಿಗೆ ಪೆಟ್ಟು ತಗಲುವದರಿಂದಲೂ ಈ ರೋಗ ಬರುವ ಸಂಭವವಿದೆ. ಶೋಥ, ದಾಹ, ಶೂಲ ಮೊದಲಾದ ಲಕ್ಷಣಗಳಿರುವದರಿಂದಲೂ ರಕ್ತದುಷ್ಟಿ ಇರುವದರಿಂದಲೂ ಪಿತ್ತಪ್ರಧಾನ ದೋಷವಿರುತ್ತದೆ. ಆದುದರಿಂದ ರವಿ, ಮಂಗಳರೇ ಈ ರೋಗದ ಕಾರಕರು.

**ಸ್ಥಾನ:** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಷಷ್ಠ ಸ್ಥಾನವೇ ಮೂಲ ಮತ್ತು ಮುಖ್ಯವಿರುತ್ತದೆ. ಏಕೆಂದರೆ ಕರುಳಿನಲ್ಲಿ ದೋಷವುಂಟಾಗಿ ಶೋಥವಾಗಿ, ವ್ರಣವೊಡೆದು ರೋಗಿ ಕೈಬಿಡುವ ಪ್ರಸಂಗವಿರುತ್ತದೆ. ಇದಲ್ಲದೆ ಅಗ್ನಿಮಾಂದ್ಯ, ಅಪಚನಗಳೇ ಮೂಲಕಾರಣವಿರುವದರಿಂದ ಕರುಳಿನ ಸ್ಥಾನವಾದ ಷಷ್ಠಸ್ಥಾನವೇ ಕಾರಕವಿರುತ್ತದೆ. ಷಷ್ಠಸ್ಥಾನ ದೂಷಿತವಿರದೆ ಈ ರೋಗ ಬರಲಾರದು.

ಷಷ್ಠಸ್ಥಾನ ನಂತರ ಪಂಚಮಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ದೋಷ ಕರುಳಿನಲ್ಲಿದ್ದರೂ ವ್ಯಕ್ತವಾಗುವದು ಹೊಟ್ಟೆಯ ಮುಖಾಂತರ.

ಈ ರೋಗದಲ್ಲಿ ಹೊಟ್ಟೆಶೂಲೆ ವಿಪರೀತವಿರುತ್ತದೆ. ಕಿಪ್ಪೊಟ್ಟೆಯಂತೂ ಮುಟ್ಟಗೊಡುವದಿಲ್ಲ. ಕಿಪ್ಪೊಟ್ಟೆಯ ಮೇಲ್ಭಾಗ ಕೆಂಪಾಗಿ ಉಬ್ಬಿಕೊಂಡಿರುತ್ತದೆ. ಆದುದರಿಂದ ಹೊಟ್ಟೆಯ ಸ್ಥಾನವಾದ ಪಂಚಮಸ್ಥಾನವನ್ನೂ ಪರಿಶೀಲಿಸಬೇಕು.

**ಕಾರಕಲಗ್ನ :**— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಕನ್ಯಾ ರಾಶಿಯು ಕರುಳಿನ ಮೇಲೆ ಪ್ರಭಾವ ಬೀರುತ್ತದೆ. ಸಿಂಹರಾಶಿಯು ಉದರದ ಮೇಲೆ ಪ್ರಭಾವ ಬೀರುತ್ತದೆ. ಆದುದರಿಂದ ಮೇಷ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ರಾಶಿ:**— ಸಾಮಾನ್ಯವಾಗಿ ಕುಳಿತಲ್ಲಿಯೇ ಕುಳಿತು ಕೆಲಸ ಮಾಡುವ ಜನರಿಗೆ ಈ ರೋಗವು ಹೆಚ್ಚಾಗಿ ತಗಲುತ್ತದೆ. ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಮಿಥುನ, ಕನ್ಯಾ, ಕುಂಭ ಈ ರಾಶಿಯ ಜನರು ಈ ರೋಗದಿಂದ ಬಳಲುವದು ಕಂಡುಬಂದಿದೆ.

## ೧೮. ಆಮ್ಲಪಿತ್ತ (Hyper acidity)

**ಆಮ್ಲಪಿತ್ತ:**— ಸಾಮಾನ್ಯವಾಗಿ ಈ ರೋಗ ತರುಣ ವಯಸ್ಸಿನಲ್ಲಿ ಪಿತ್ತಪ್ರಕೃತಿಯವರಿಗೂ, ಬಯಲು ಪ್ರದೇಶದವರಿಗೂ ಬರುತ್ತದೆ. ಬೇಸಿಗೆಯಲ್ಲಿ ಇದರ ಉಪದ್ರವ ಬಹಳ.

**ಕಾರಕಗ್ರಹ:**— ರೋಗದ ಹೆಸರೇ ಸೂಚಿಸುವಂತೆ ಪಿತ್ತಪ್ರಧಾನವಾದ ದೋಷವಿರುವದರಿಂದ ರವಿ-ಮಂಗಳರೇ ಈ ರೋಗದ ಕಾರಕರು.

**ಕಾರಕಸ್ಥಾನ:**— ಊಟದ ನಂತರ ಗಂಟಲಿನಲ್ಲಿ ಹುಳಿ-ತೇಗು ಆಗುವಿಕೆ, ಬಾಯಿ-ಕಹಿಯಾಗುವಿಕೆ, ಹುಳಿ, ಕಹಿ, ವಾಂತಿಯಾಗುವಿಕೆ ಮತ್ತು ಆಮಾಶಯದಲ್ಲಿ ಉರಿ ಇವೇ ಪ್ರಧಾನದೋಷಗಳಿರುವದರಿಂದ, ಆಮಾಶಯಸ್ಥಾನವಾದ ಪಂಚಮಸ್ಥಾನವೇ ಈ ರೋಗದ ಕಾರಕಸ್ಥಾನವು. ಪಂಚಮದಲ್ಲಿ ಅನೇಕ ಗ್ರಹಗಳಿದ್ದು ಅಥವಾ ಪಂಚಮಸ್ಥಾನದ ಮೇಲೆ ಅನೇಕ ಗ್ರಹಗಳ ದೃಷ್ಟಿಯಿದ್ದು, ಪಂಚಮೇಷ ದುರ್ಬಲನಿದ್ದ ಜಾತಕನಿಗೆ ಈರೋಗದ ಭೀತಿ ಇರುತ್ತದೆ.

## ೨೧. ರಕ್ತದ ಒತ್ತಡ (Blood Pressure)
## ಬ್ಲಡ್ ಪ್ರೆಶರ್

ಬ್ಲಡ್ ಪ್ರೆಶರ್ ಎಂದರೆ ರಕ್ತದ ಒತ್ತಡ. ನಮ್ಮ ಶರೀರದಲ್ಲಿಯ ಹೃದಯವು ರಕ್ತವನ್ನು ಪಂಪು ಮಾಡುತ್ತದೆ. ಅಂದರೆ ತಾನು ತಯಾರಿಸಿದ ರಕ್ತವನ್ನು ಶರೀರದ ವಿವಿಧ ಭಾಗಗಳಿಗೆ ಕಳಿಸುವ ಕಾರ್ಯ ಮಾಡುತ್ತದೆ. ಈ ಕಾರ್ಯ ವ್ಯಕ್ತಿಯು ಜನಿಸಿದಂದಿನಿಂದ ಸಾಯುವವರೆಗೂ ಎಡಬಿಡದೆ ನಡೆಯುತ್ತದೆ. ಈ ಕಾರ್ಯ ನಿಂತರೆ ತಕ್ಷಣ ಸಾವು ಬರುತ್ತದೆ. ಈ ಯಂತ್ರವು ಧಮನಿಗಳ ಮುಖಾಂತರ ಶುದ್ಧ ರಕ್ತವನ್ನು ಕಳಿಸುತ್ತದೆ. ಈ ಶುದ್ಧ ರಕ್ತವು ಹರಿಯುವಾಗ, ಧಮನಿಗಳ ಭಿತ್ತಿಗಳು ಉಬ್ಬುತ್ತಲೂ ಕುಗ್ಗುತ್ತಲೂ (ಪ್ರಸರಣ, ಆಕುಂಚನ) ರಕ್ತವನ್ನು ಮುಂದಕ್ಕೆ ತಳ್ಳುವವು. ರಕ್ತದಲ್ಲಿರುವ ಆಹಾರ ದ್ರವ್ಯಗಳನ್ನು ಈ ರಕ್ತವು ಪುನಃ ತಂತುಗಳ ಮೂಲಕ ದೇಹದ ಎಲ್ಲ ಕಡೆಗೂ ಕೊಂಡೊಯ್ಯುತ್ತದೆ. ಆಗ ಸುತ್ತಲೂ ಸಂಗ್ರಹಿಸಬಹುದಾದ ಅಶುದ್ಧ ರಕ್ತವನ್ನು ಪುನಃ ಹೊತ್ತುಕೊಂಡು ಶಿರೆಗಳ ಮೂಲಕ ಪುನಃ ಹೃದಯವನ್ನು ಸೇರುತ್ತದೆ. ಧಮನಿಗಳ ಮೂಲಕ ರಕ್ತವು ಹರಿಯುವ ವೇಗವೂ ಆ ರಕ್ತದ ಚಲನೆಯಲ್ಲಿ ತೋರುವ ಶಕ್ತಿಯೂ ಇರುವ ಕ್ರಿಯೆಗೆ ರಕ್ತದ ಒತ್ತಡ ಎನ್ನುತ್ತಾರೆ. ಈ ಕ್ರಿಯೆಯು ವಿಕೃತವಾಗುವದೇ ರಕ್ತದ ಒತ್ತಡದ ದೋಷವು.

**ಕಾರಕಗ್ರಹ:—** ಹೃದಯದ ಕಾರ್ಯದಲ್ಲಿ ವಿಕೃತಿಯಾಗುವದೇ ಮೂಲ ಹಾಗೂ ಮುಖ್ಯ ಲಕ್ಷಣವಾಗಿರುವದರಿಂದ ಹೃದಯದ ಮೇಲೆ ಮತ್ತು ರಕ್ತದ ಮೇಲೆ ಆಧಿಪತ್ಯ ಪೊಂದಿದ ರವಿಯೇ ಈ ರೋಗದ ಕಾರಕನು.

ರವಿಯ ನಂತರ ಮಂಗಳನನ್ನೂ ಪರಿಶೀಲಿಸಬೇಕು. ಏಕೆಂದರೆ ತೀವ್ರ ಸಿಟ್ಟಿಗೇಳುವ ಶೀಘ್ರ ಕೋಪಿಗಳಿಗೆ ಈ ರೋಗದ ಬಾಧೆ ಬಹುಬೇಗ ತಟ್ಟುವದರಿಂದ ಸಿಟ್ಟಿನ ಗುಣಧರ್ಮದ ಮಂಗಳನೂ ಕೆಲವಟ್ಟಿಗೆ ಕಾರಕನಾಗುತ್ತಾನೆ.

**ಕಾರಕಸ್ಥಾನ:—** ಈ ರೋಗದ ಕಾರಕಸ್ಥಾನಗಳೆಂದರೆ ತನುಸ್ಥಾನ ಹಾಗೂ ಚತುರ್ಥಸ್ಥಾನಗಳಿರುತ್ತವೆ. ಏಕೆಂದರೆ ಮಾನಸಿಕ ಪ್ರಕ್ಷುಬ್ಧಿಯಿಂದ

ನರಮಂಡಲವು ಸಂವಿದ್ಧವಾಗಿ ತಾತ್ಕಾಲಿಕವಾಗಿ ರಕ್ತದ ಒತ್ತಡವು ಹೆಚ್ಚಾಗುತ್ತದೆ. ಇದಲ್ಲದೆ ಅತಿ ಮದ್ಯಪಾನ, ಅತಿ ತಂಬಾಕಾದಿಗಳನ್ನು ತಿನ್ನುವಿಕೆ ಈ ಮೊದಲಾದ್ಯಅಭ್ಯಾಸ (ಚಟ)ದ ಮೂಲಕವೂ ರಕ್ತದ ಒತ್ತಡ ಹೆಚ್ಚುತ್ತದೆ. ಮತ್ತು ಚಿಕ್ಕಂದಿನಲ್ಲಿ ವ್ಯಾಯಾಮ ಮಾಡಿ ಮುಂದೆ ದೈಹಿಕ ಶ್ರಮವಿಲ್ಲದೆ ಉದ್ಯೋಗವನ್ನು ಮಾಡುವವರಿಗೆ (ಉದಾ:— ಪೈಲವಾನರಿಗೆ) ಕೂಡ ರಕ್ತದ ಒತ್ತಡವು ಹೆಚ್ಚುತ್ತದೆ. ದಪ್ಪವಾಗಿ ಬೆಳೆದ ಸ್ಥೂಲಕಾಯದ ಜನರಲ್ಲಿ ರಕ್ತದ ತಂತುಗಳಲ್ಲಿ ಮೇಧಸ್ಸು ನಿಂತು ರಕ್ತದ ಚಲನೆಗೆ ವಿರೋಧವುಂಟಾಗುತ್ತದೆ. ಆದುದರಿಂದ ರಕ್ತದ ಒತ್ತಡ ಹೆಚ್ಚಾಗುತ್ತದೆ. ಈ ಎಲ್ಲ ಗುಣ ಧರ್ಮಗಳು ಜಾತಕದ ತನುಸ್ಥಾನದಿಂದ ತಿಳಿಯುತ್ತವೆ.

ಯಾವುದೇ ಕಾರಣದಿಂದ ಹೃದಯದ ಗಾತ್ರವು ದೊಡ್ಡದಾದರೆ ಆಗಲೂ ಒತ್ತಡವು ಹೆಚ್ಚಾಗುತ್ತದೆ. ಇವಲ್ಲದೆ ರಕ್ತನಾಳ ಮತ್ತು ಭಿತ್ತಿಗಳಲ್ಲಿ ದೌರ್ಬಲ್ಯವುಂಟಾದರೆ ಪ್ರಸರಣ-ಆಕುಂಚನಗಳು ಕ್ರಮಬದ್ಧವಾಗಿ ನಡೆಯದೆ ರಕ್ತದ ಒತ್ತಡವು ಹೆಚ್ಚಾಗುವದು. ಈ ಎರಡೂ ಕ್ರಿಯೆಗಳು ಹೃದಯದಿಂದ ಆಗುತ್ತವೆ. ಆದುದರಿಂದ ಹೃದಯಸ್ಥಾನವಾದ ಚತುರ್ಥ ಸ್ಥಾನವು ಕಾರಕ ವಿರುತ್ತದೆ. ಇಂತು ಚತುರ್ಥ ಸ್ಥಾನ, ತನುಸ್ಥಾನ, ಚತುರ್ಥೇಶ, ಲಗ್ನೇಶ ದೂಷಿತರಿರದೆ ಯಾರಿಗೂ ಹೃದಯರೋಗ ಉಂಟಾಗಲಾರದು.

**ಲಗ್ನ :**— ನಿರ್ದಿಷ್ಟವಾದ ಲಗ್ನದವರೇ ಈ ರೋಗದಿಂದ ಬಳಲುವರೆಂದು ಹೇಳಲು ಬಾರದು. ಆದರೆ ಸಿಂಹ ರಾಶಿಯು ಹೃದಯದ ಮೇಲೆ ಆಧಿಪತ್ಯ ಹೊಂದಿದೆ. ಕುಂಭ ರಾಶಿಯು ಶರೀರಕ್ಕೆ ರಕ್ತ ಪೂರೈಸುವ ಗುಣಧರ್ಮವನ್ನು ಹೊಂದಿದೆ. ಈ ಎರಡೂ ರಾಶಿಗಳು ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು. ಆದುದರಿಂದ ವೃಷಭ, ಸಿಂಹ, ಕನ್ಯಾ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿ ಬಳಲುವದು ಕಂಡುಬರುತ್ತದೆ. ತದನಂತರ ಕರ್ಕ, ವೃಶ್ಚಿಕ, ಕುಂಭ ಈ ಲಗ್ನದವರಿಗೂ ಈ ರೋಗದ ಭೀತಿಯಿರುತ್ತದೆ.

**ರಾಶಿ :**— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಪಿತ್ತ ಪ್ರಕೃತಿಯ ಅಗ್ನಿರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿಗೂ ತದನಂತರ

ಬೌದ್ಧಿಕ ರಾಶಿಯವರಾದ ಮಿಥುನ ತುಲಾ, ಕುಂಭ ಈ ರಾಶಿಯವರಿಗೂ ಈ ರೋಗದ ಭೀತಿ ಬಹಳ.

**ಯೋಗಗಳು :**

೧) ಅಗ್ನಿರಾಶಿಯ ರವಿ-ಮಂಗಳರು ಲಗ್ನ ಇಲ್ಲವೆ ಚತುರ್ಥದಲ್ಲಿದ್ದರೆ,

೨) ಲಗ್ನ, ಚತುರ್ಥ, ದಶಮ, ಸಪ್ತಮ ಈ ಸ್ಥಾನಗಳಲ್ಲಿ ಯಾವದರಲ್ಲಾದರೂ ಅನೇಕ ಗ್ರಹಗಳಿದ್ದರೆ,

೩) ಅನೇಕ ಗ್ರಹಗಳ ದೃಷ್ಟಿ ಲಗ್ನ, ಚತುರ್ಥದ ಮೇಲಿದ್ದರೆ,

೪) ಪುರುಷ ರಾಶಿಯ ಅನೇಕ ಗ್ರಹಗಳು ಲಗ್ನ, ಚತುರ್ಥದಲ್ಲಿದ್ದರೆ,

೫) ರವಿ-ಮಂಗಳ, ರವಿ-ಶನಿ, ಶನಿ-ಮಂಗಳ, ರವಿ-ಕೇತು, ರಾಹು-ಮಂಗಳ ಈ ಗ್ರಹಗಳ ಯುತಿಯೋಗವು ಲಗ್ನ-ಚತುರ್ಥದಲ್ಲಿದ್ದರೆ,

೬) ರವಿ-ಮಂಗಳ, ರವಿ-ಶನಿ, ಶನಿ-ಮಂಗಳ, ರವಿ-ಕೇತು, ರಾಹು-ಮಂಗಳ ಈ ಗ್ರಹಗಳ ಯುತಿಯೋಗವಾಗಲಿ ಪ್ರತಿಯೋಗವಾಗಲಿ ಲಗ್ನ, ಸಪ್ತಮ, ಚತುರ್ಥ-ದಶಮದಲ್ಲಿದ್ದರೆ,

೭) ಲಗ್ನೇಶ, ಚತುರ್ಥೇಶರು ದುರ್ಬಲರಿದ್ದರೆ,

೮) ಚಂದ್ರನು ದುರ್ಬಲನಿದ್ದು, ಲಗ್ನ-ಚತುರ್ಥದಲ್ಲಿ ಪಾಪಗ್ರಹಗಳಿದ್ದರೆ,

೯) ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನು ೧, ೪, ೬, ೮ ಈ ಸ್ಥಾನಗಳಲ್ಲಿದ್ದರೆ,

೧೦) ಚಂದ್ರನು ಪಾಪಗ್ರಹಯುಕ್ತನಾಗಿ, ಪಾಪಗ್ರಹಮಧ್ಯದವನಾಗಿ ಲಗ್ನ, ಚತುರ್ಥ, ದಶಮದಲ್ಲಿದ್ದರೆ,

೧೧) ರವಿ, ಚಂದ್ರ, ಚತುರ್ಥ ಸ್ಥಾನ, ಚತುರ್ಥೇಶ, ಸಿಂಹರಾಶಿ, ಕುಂಭರಾಶಿ, ಲಗ್ನೇಶ ಈ ಏಳರಲ್ಲಿ ಯಾವುದೇ ನಾಲ್ಕು ದೂಷಿತವಿದ್ದರೆ,

೧೨) ಶನಿಯು ಅಗ್ನಿರಾಶಿಯವನಾಗಿ ರವಿಯು ವಾಯು- ಇಲ್ಲವೆ ಜಲರಾಶಿಯವನಾಗಿದ್ದರೆ,

ಈ ಮೇಲೆ ಹೇಳಿದ ಹನ್ನೆರಡು ಯೋಗಗಳಲ್ಲಿ ಯಾವದೇ ಯೋಗದಲ್ಲಿ ಜನಿಸಿದವನಿಗೆ ರಕ್ತದ ಒತ್ತಡ ಉಂಟಾಗುತ್ತದೆ.

## ೨೨. ರಕ್ತಪಿತ್ತ
## (Heamorrhagic diseases, or Scurvy)

ಬಹಳ ಉಷ್ಣ, ತೀಕ್ಷ್ಣ, ಕ್ಷಾರ, ಖಾರ, ಹುಳಿ, ಉಪ್ಪು ಮೊದಲಾದ ಪಿತ್ತಕಾರಕವಾದ ಖಾದ್ಯಗಳ ಅತಿಸೇವನೆಯಿಂದ ಕುಪಿತವಾದ ಪಿತ್ತರಕ್ತಗಳು ಒಂದರಲ್ಲೊಂದು ಕೂಡಿಕೊಂಡು ಒಂದೇ ರೂಪ ತಾಳುವದರಿಂದ ರಕ್ತಪಿತ್ತ ಉಂಟಾಗುತ್ತದೆಂದು ಆಯುರ್ವೇದ ಶಾಸ್ತ್ರಜ್ಞರ ಅಭಿಪ್ರಾಯ. ಆದುದರಿಂದ ಇದು ಪಿತ್ತಪ್ರಧಾನ ರೋಗವು. ಈ ರೋಗವು ಸ್ವತಂತ್ರವಾಗಿಯೂ ಬರುತ್ತದೆ; ಇಲ್ಲವೆ ಕ್ಷಯ, ಟಾಯ್‌ಫಾಯಿಡ್, ಬ್ಲಡ್ ಪ್ರೆಶರ್, ನಿಮೋನಿಯಾ ಮೊದಲಾದ ರೋಗಗಳಲ್ಲಿ ಉಪದ್ರವ ರೂಪವಾಗಿಯೂ ಬರುತ್ತದೆ. ಇದರ ಹಿನ್ನೆಲೆಯಲ್ಲಿ ಈ ರೋಗದ ವಿಷಯವಾಗಿಯೂ ಜ್ಯೋತಿಷ್ಯದ ಭಾಷ್ಯೆ ವೆನೆಂಬುದನ್ನು ನೋಡುವಾ.

**ಕಾರಕಗ್ರಹ :—** ರೋಗದ ಹೆಸರೇ ಸೂಚಿಸುವಂತೆ ಅಂದರೆ ರಕ್ತ, ಪಿತ್ತಗಳೇ ಪ್ರಧಾನ ದೂಷಿತ ಧಾತುಗಳಿರುವ ಮೂಲಕ ಪಿತ್ತದೋಷವೇ ಪ್ರಧಾನವಿರುತ್ತದೆ. ಆದುದರಿಂದ ರವಿ–ಮಂಗಳರೇ ಈ ರೋಗದ ಕಾರಕರು.

ರವಿ, ಮಂಗಳರ ತರುವಾಯ ಚಂದ್ರನೂ ಈ ರೋಗದ ಕಾರಕನಾಗುವನು. ಏಕೆಂದರೆ ಶರೀರದ ಯಾವದೊಂದು ಭಾಗದಿಂದ ರಕ್ತವು ಹೊರಗೆ ಹೋಗುವಿಕೆ (ಸ್ರವಿಸುವಿಕೆ) ಯು ಈ ರೋಗದ ಮುಖ್ಯ ಲಕ್ಷಣವಿರುತ್ತದೆ. ರಕ್ತದಲ್ಲಿ ಘನ ಅಂಶ ಕಡಿಮೆಯಾಗಿ ಜಲಾಂಶ ಅಧಿಕವಾಗುವದರಿಂದ ರಕ್ತಸ್ರಾವವಾಗುತ್ತದೆ. ಈ ಎಲ್ಲ ಗುಣಧರ್ಮವು ಚಂದ್ರಗ್ರಹದಲ್ಲಿರುವದರಿಂದ ಚಂದ್ರನೂ ಸಹ ಈ ರೋಗದ ಕಾರಕನು.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ರೋಗದ ಸ್ಥಾನ ಯಾವದು ಎಂಬುದು ಒಂದು ಸಮಸ್ಯೆಯೆ! ಏಕೆಂದರೆ ಗುದ, ಶಿಶ್ನ, ನಾಸಿಕ, ಕರ್ಣ, ನೇತ್ರ ಮೊದಲಾದ ದೇಹದ ಭಾಗಗಳಿಂದ ರಕ್ತ ಹೊರಬೀಳುವದೇ ಈ ರೋಗದ ಮುಖ್ಯ ಲಕ್ಷಣವಿರುವದರಿಂದ ಬೇರೆ ಬೇರೆ ಸ್ಥಾನಗಳು ದೂಷಿತವಿರುತ್ತವೆ. ಆಯಾ ಭಾಗದ ಕಾರಕಸ್ಥಾನಗಳೇ ಈ ರೋಗದ

ಕಾರಕವಿರುತ್ತವೆ. ಆದುದರಿಂದ ಮೊದಲು ಈ ರೋಗದಲ್ಲಿಯ ಪ್ರಕಾರ ಗಳನ್ನು ತಿಳಿದುಕೊಂಡು ಕಾರಕಸ್ಥಾನಗಳನ್ನು ಪರಿಶೀಲಿಸುವಾ.

## ರಕ್ತಪಿತ್ತದ ಪ್ರಕಾರಗಳು

ಈ ರೋಗದಲ್ಲಿ ಮೂರು ಪ್ರಕಾರಗಳಿವೆ. ೧) ಊರ್ಧ್ವಗತ ರಕ್ತಪಿತ್ತ, ೨) ಅಧೋಗತ ರಕ್ತಪಿತ್ತ, ೩) ಉಭಯಜ ರಕ್ತಪಿತ್ತ. ಈ ಮೂರೂ ಪ್ರಕಾರದ ರೋಗಗಳಿಗೆ ಕಾರಕಸ್ಥಾನ, ಗ್ರಹಗಳು ಭಿನ್ನ ಭಿನ್ನವಿರುವದರಿಂದ ಪ್ರತ್ಯೇಕವಾಗಿ ವಿವರಿಸುವಾ.

**ಊರ್ಧ್ವಗತ ರಕ್ತಪಿತ್ತ :**

**ಸ್ಥಾನ :—** ಕಣ್ಣು, ಕಿವಿ, ಮೂಗು, ಮುಖ ಈ ಭಾಗಗಳಿಂದ ರಕ್ತ ಸ್ರಾವವಾಗುವದರಿಂದ ಇದಕ್ಕೆ "ಊರ್ಧ್ವಗತ ರಕ್ತಪಿತ್ತ" ಎನ್ನುವರು.

ಈ ವಿಕಾರದ ಸ್ಥಾನಗಳೆಂದರೆ ಲಗ್ನ ತೃತೀಯ, ದ್ವಿತೀಯ, ದ್ವಾದಶ ಸ್ಥಾನಗಳಿರುತ್ತವೆ. ಆದುದರಿಂದ ಈ ಸ್ಥಾನಗಳೂ, ಈ ಸ್ಥಾನಾಧೀಶರೂ ದೂಷಿತರಿರದೆ ಯಾರಿಗೂ ಈ ವಿಕಾರವಾಗಲಾರದು.

**ಕಾರಕಗ್ರಹ :—** ಕಣ್ಣು, ಕಿವಿ, ಮೂಗು, ಮುಖ ಈ ಅವಯವ ಗಳಿಂದ ರಕ್ತಸ್ರಾವವಾಗುತ್ತದೆ. ಈ ಅವಯವಗಳು ಕಫಸ್ಥಾನದಲ್ಲಿರುವದ ರಿಂದ ಕಫದೋಷವೂ ಕೆಲಮಟ್ಟಿಗೆ ಇರುತ್ತದೆ. ಆದುದರಿಂದ ರವಿ–ಮಂಗಳರ ಹೊರತಾಗಿ ಗುರು–ಚಂದ್ರರೂ ಈ ರೋಗದ ಕಾರಕರಿರುತ್ತಾರೆ.

**ಅಧೋಗತ ರಕ್ತಪಿತ್ತ :**

**ಸ್ಥಾನ :—** ಗುದ, ಶಿಸ್ನ, ಯೋನಿಗಳಿಂದ ರಕ್ತ ಹೊರಬೀಳುವದೇ ಈ ರೋಗದ ಲಕ್ಷಣವಿರುತ್ತದೆ. ಈ ಎಲ್ಲ ಅವಯವಗಳ ಮೇಲೆ ಆಧಿಪತ್ಯ ಹೊಂದಿದ ಅಷ್ಟಮ ಸ್ಥಾನವೇ ಈ ರೋಗದ ಕಾರಕಸ್ಥಾನವು. ಆದುದರಿಂದ ಅಷ್ಟಮಸ್ಥಾನ, ಅಷ್ಟಮೇಶರು ದೂಷಿತರಿರದೆ ಯಾರಿಗೂ ಈ ವಿಕಾರವುಂಟಾ ಗಲಾರದು.

**ಕಾರಕಗ್ರಹ :—** ಗುದ, ಶಿಸ್ನ, ಯೋನಿ ಈ ಭಾಗಗಳು ವಾತಸ್ಥಾನ ದಲ್ಲಿರುವವು. ಆದುದರಿಂದ ವಾತಕಾರಕನಾದ ಶನಿಯನ್ನು ರವಿ–ಮಂಗಳರ

ಸಂಗಡ ಪರಿಶೀಲಿಸಬೇಕು. ಅದು ಕಾರಣ ರವಿ, ಮಂಗಳ, ಶನಿಯರೇ ಈ ರೋಗದ ಕಾರಕರು.

**ಉಭಯಗಾಮಿ ಪಿತ್ತ :—** ಇದರಲ್ಲಿ ಎರಡು ಪ್ರಕಾರದ ಗ್ರಹ, ಸ್ಥಾನಾದಿಗಳನ್ನು ಪರಿಶೀಲಿಸಬೇಕು.

**ಲಗ್ನ:—** ಈ ಮೂರೂ ಪ್ರಕಾರದ ವಿಕಾರಗಳ ಲಗ್ನಗಳೆಂದರೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ. ಈ ಲಗ್ನದವರೇ ಹೆಚ್ಚಾಗಿ ಈ ವಿಕಾರಗಳಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕನ್ಯಾ, ಸಿಂಹ, ಮಕರ, ಧನು ಈ ರಾಶಿಯವರೇ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

## ೨೪. ಪ್ರತಿಶಾಯ ಹಾಗೂ ಕಾಸ (Cold & Cough) ನೆಗಡಿ ಹಾಗೂ ಕೆಮ್ಮು

ಕೆಮ್ಮು ಇದು ಸ್ವತಂತ್ರ ರೋಗವಾಗಿ ಬರದೆ ಕ್ಷಯ, ಆಂತ್ರಿಕ ಶ್ಲೇಷ್ಮಕ, ಶ್ವಸನಕ, ಹೃದ್ರೋಗ ಮೊದಲಾದ ಅನೇಕ ರೋಗಗಳಲ್ಲಿ ಲಕ್ಷಣ ಇಲ್ಲವೆ ಉಪದ್ರವರೂಪವಾಗಿ ಬರುವದೇ ಹೆಚ್ಚು. ನೆಗಡಿಯಿಂದ ಕೆಮ್ಮು, ಕೆಮ್ಮಿನಿಂದ ಕ್ಷಯ ರೋಗ ಉತ್ಪನ್ನವಾಗುವದೆಂದು ಮಾಧವರು ಹೇಳಿದ್ದಾರೆ. ಇಷ್ಟೇ ಯಾಕೆ, ಕಾಸದ ಉಪೇಕ್ಷೆಯಿಂದ ಶ್ವಾಸರೋಗ ಉಂಟಾಗುತ್ತದೆಂದು ವೈದ್ಯಕೀಯ ಶಾಸ್ತ್ರಜ್ಞರ ಅಭಿಪ್ರಾಯ. ಆದುದರಿಂದ ನಾವೂ ಕೂಡ ಸ್ವತಂತ್ರವಾಗಿ ಈ ರೋಗದ ವಿಷಯವಾಗಿ ಜ್ಯೋತಿಷ್ಯದ ಭಾಷ್ಯವೇನು ಎಂಬುದನ್ನು ನೋಡುವಾ.

**ಕಾರಕಗ್ರಹ :—** ಈ ರೋಗದ ಕಾರಕಗ್ರಹವೆಂದರೆ ಶನಿಯು. ಏಕೆಂದರೆ ಪ್ರಾಣ ಹಾಗೂ ಉದಾನ ವಾಯುಗಳ ದೋಷದಿಂದ ಈ ರೋಗ ಉತ್ಪನ್ನವಾಗುತ್ತದೆ. ಕೆಳಗೆ ಪ್ರತಿಬದ್ಧವಾದ ವಾತವು ಮೇಲಕ್ಕೆ ಏರಿ ಎದೆಗೆ ಬಂದು— ಅದರಲ್ಲಿಯೂ ಕಂಠದಲ್ಲಿ ಸೇರಿಕೊಂಡು—ತಲೆಯ ಶಿರಗಳನ್ನು ವ್ಯಾಪಿಸಿ ಎಲ್ಲ ಅವಯವಗಳನ್ನು ಮೇಲಕ್ಕೆತ್ತಿ ಒಗೆದಂತೆಯೂ, ಕಣ್ಣುಗಳನ್ನು

ಹೊರಗೆ ನೂಕಿದಂತೆಯೂ ಮಾಡುತ್ತ ಬೆನ್ನು, ಎದೆ, ಪಕ್ಕೆಲುಗಳನ್ನು ಹಿಡಿ ಸುತ್ತ ಕಂಚಿನ ಪಾತ್ರೆಯಂಥ ಧ್ವನಿಯ ಸದ್ದು ಬಾಯಿಂದ ಹೊರಡುವದು ಎಂದು ಆಯುರ್ವೇದ ಶಾಸ್ತ್ರಜ್ಞರು ಹೇಳಿದ್ದಾರೆ. ಈ ಎಲ್ಲ ಲಕ್ಷಣ ಹಾಗೂ ಗುಣ-ಧರ್ಮಗಳು ಶನಿ ಗ್ರಹದಲ್ಲಿರುವದರಿಂದ ಶನಿಯೇ ಈ ರೋಗದ ಕಾರಕನು.

**ಕಾರಕಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯ ಸ್ಥಾನವೇ ಈ ರೋಗದ ಕಾರಕಸ್ಥಾನ. ಆದುದರಿಂದ ದ್ವಿತೀಯೇಶ, ದ್ವಿತೀಯ ಸ್ಥಾನಗಳು ದೂಷಿತರಿರದೆ ಯಾರಿಗೂ ಈ ವಿಕಾರವಾಗಲಾರದು.

**ಕಾರಕಲಗ್ನ:**— ಪ್ರಾಣ ಹಾಗೂ ಉದಾನ ವಾಯುಗಳ ಮೇಲೆ ವೃಷಭರಾಶಿಯ ಪ್ರಭಾವವಿರುತ್ತದೆ. ವೃಷಭ ರಾಶಿಯು ದೂಷಿತವಿರದೆ ಯಾರಿಗೂ ಈ ವಿಕಾರವಾಗಲಾರದು. ಆದುದರಿಂದ ಮಿಥುನ, ತುಲಾ, ಧನು ಈ ಲಗ್ನದವರು, ತದನಂತರ ವೃಷಭ, ಕನ್ಯಾ, ಈ ಲಗ್ನದವರು ಹೆಚ್ಚಾಗಿ ಈ ವಿಕಾರದಿಂದ ಬಳಲುವದು ಕಂಡುಬರುತ್ತದೆ.

**ರಾಶಿ:**— ಮೇಲಿಂದ ಮೇಲೆ ನೆಗಡಿ-ಕೆಮ್ಮುಗಳಿಂದ ಬಳಲುವ ರಾಶಿಯವರೆಂದರೆ ವೃಷಭ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ರಾಶಿಯವರೇ ಹೆಚ್ಚಾಗಿ ಇರುವದು ಕಂಡುಬಂದಿದೆ.

ಮೇಷ, ಸಿಂಹ, ಧನು ಈ ರಾಶಿಯ ಜನರು ಅನುಪಮ (ಮಲೆನಾಡು) ಪ್ರದೇಶದಲ್ಲಿದ್ದರೆ ಈ ವಿಕಾರದ ಬಾಧೆಯಾಗುವದು ಹೆಚ್ಚು.

## ೨೪. ದಮ್ಮು (Asthma)

### ಅಸ್ಥಮಾ-ಶ್ವಾಸ

ವಯಸ್ಸಿನ ಹಾಗೂ ಲಿಂಗದ ನಿರ್ಬಂಧವಿಲ್ಲದೆ ಬರುವ ರೋಗಗಳಲ್ಲಿ ದಮ್ಮು (ಅಸ್ಥಮಾ) ರೋಗಕ್ಕೇ ಅಗ್ರಸ್ಥಾನ. ಇದರಂತೆ ಅಸ್ಥಮಾ ರೋಗಿಗಳನ್ನೂ ಸಹ ಗುರುತಿಸುವದು ಕಠಿಣ ಕಾರ್ಯವಲ್ಲ. ಬಡಕಾದ ದೇಹ, ಒಳಗೆ ಸೇರಿದ ದೊಡ್ಡ ಕಣ್ಣುಗಳು, ಮುಂದೆ ಹಾಯ್ದ ಎದೆ, ತಲೆ-ಬೆನ್ನನ್ನು ಬಗ್ಗಿಸಿ (ಡೂಗು) ನಡೆಯುವ ಕ್ರಮ, ಸ್ವಲ್ಪ ದಾರಿ ನಡೆದ ಕೂಡಲೆ ತೀವ್ರ

ಶ್ವಾಸೋಚ್ಛ್ವಾಸನ ಮಾಡುವ (ದಮ್ಮುಹತ್ತುವ) ಹಾಗೂ ತೇಕು ಹತ್ತುವಿಕೆ, ಮೇಲಿಂದ ಮೇಲೆ ಕೆಮ್ಮುವ, ಕೆಮ್ಮಿನಲ್ಲಿ ಲೋಳೆ ಹಾಗು ಜಿಗುಟುಗಳಿಂದ ಕೂಡಿದ ಉಗುಳು, ಇವೇ ಮೊದಲಾದ ಅಂಗರಚನೆ, ಮುಖಲಕ್ಷಣ, ಸ್ವಭಾವಾದಿಗಳಿರುವ ಅಸ್ತಮಾ ರೋಗಿಗಳನ್ನು ತೀವ್ರ ಗುರುತಿಸಬಹುದು.

ಈ ರೋಗವು ಶೀತ ಕಾಲದಲ್ಲಿಯೂ, ಶೀತ ಪ್ರದೇಶದಲ್ಲಿಯೂ ಇದರ ಉಪದ್ರವ ಬಹಳ. ಇದು ಸಾಮಾನ್ಯವಾಗಿ ಅನುವಂಶ ಇಲ್ಲವೆ ಸ್ವಾರ್ಜಿತವಾಗಿಯೂ ಬರುತ್ತದೆ. ಸ್ವತಂತ್ರ ರೋಗವಾಗಿಯೂ ಅಂಟಕೊಳ್ಳುತ್ತದೆ. ಇಲ್ಲವೆ ಪಾಂಡುರೋಗ, ಆಮಾತಿಸಾರ, ಛರ್ದಿ, ವಿಷ ಮೊದಲಾದ ರೋಗಗಳಲ್ಲಿ ಉಪದ್ರವ ರೂಪವಾಗಿಯೂ ಬರುತ್ತದೆ. ಕಾಸವನ್ನು ನಿರ್ಲಕ್ಷ್ಯಮಾಡುವದರಿಂದಲೂ ಈ ರೋಗ ತಗಲುತ್ತದೆ ಎಂದು ಆಯುರ್ವೇದ ಶಾಸ್ತ್ರ ಹೇಳುತ್ತದೆ. ಈ ರೋಗಕ್ಕೆ ಸಾಮಾನ್ಯವಾಗಿ ದಮ್ಮು ಎಂತಲೂ ಶಾಸ್ತ್ರೀಯ ಭಾಷೆಯಲ್ಲಿ ಶ್ವಾಸವೆಂತಲೂ, ಇಂಗ್ರೇಜಿಯಲ್ಲಿ ಅಸ್ತಮಾ ಎಂತಲೂ ಕರೆಯುವ ವಾಡಿಕೆಯಿದೆ. ಇದರ ಇಷ್ಟೊಂದು ಹಿನ್ನೆಲೆಯಲ್ಲಿ ಈ ರೋಗದ ವಿಷಯವಾಗಿ ಜ್ಯೋತಿಷ್ಯದ ಭಾಷ್ಯವೇನು ? ಕಾರಕ ಗ್ರಹ, ಲಗ್ನ, ರಾಶಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಶರೀರವನ್ನೆಲ್ಲ ವ್ಯಾಪಿಸಿರುವ ವಾಯುವಿನ ಗತಿಯು ಕಫದಿಂದ ಪ್ರತಿಬದ್ಧವಾಗಲು ಅದು ದುಷ್ಟವಾಗಿ ಪ್ರಾಣ, ಉದಕವಹ, ಅನ್ನವಹ, ಶ್ರೋತಸ್ಸುಗಳನ್ನು ದುಷ್ಟಮಾಡಿ ಮುಖ್ಯವಾಗಿ ಎದೆಯಲ್ಲಿದ್ದುಕೊಂಡು ಆಮಾಶಯದಿಂದ ಶ್ವಾಸವನ್ನುಂಟುಮಾಡುತ್ತದೆ ಎಂದು ಆಯುರ್ವೇದ ಶಾಸ್ತ್ರಜ್ಞರ ಅಭಿಪ್ರಾಯ. ಆದುದರಿಂದ ಇದು ಕಫ-ವಾತ ಪ್ರಧಾನ ದೋಷದ ರೋಗವು. ಆದುದರಿಂದ ಚಂದ್ರ-ಶನಿಯರೇ ಈ ರೋಗದ ಕಾರಕರು. ಚಂದ್ರ-ಶನಿಯರ ತರುವಾಯ ಬುಧನೂ ಈ ರೋಗದ ಕಾರಕನು. ಏಕೆಂದರೆ ಶ್ವಾಸೋಚ್ಛ್ವಾಸದಲ್ಲಿ ವಿಕೃತಿಯನ್ನುಂಟುಮಾಡುವ ಗುಣಧರ್ಮವು ಬುಧ ಗ್ರಹದಲ್ಲಿ ಇರುತ್ತದೆ. ಆದುದರಿಂದ ಶನಿ, ಬುಧ, ಚಂದ್ರ ಈ ಮೂರು ಗ್ರಹಗಳು ದೂಷಿತರಿರದೆ ಯಾರಿಗೂ ಈ ರೋಗವು ಉಂಟಾಗಲಾರದು.

**ಕಾರಕಲಗ್ನ :—** ಪ್ರಾಣ ಹಾಗೂ ಉದಕ ಮತ್ತು ಅನ್ನವಹ ಶ್ರೋತಸ್ಸುಗಳು ದುಷ್ಟವಾಗುವದೇ ಈ ರೋಗದ ಲಕ್ಷಣವು. ಈ ಶ್ರೋತಸ್ಸುಗಳ ಮೇಲೆ ವೃಷಭ ರಾಶಿಯ ಆಧಿಪತ್ಯವಿರುವದರಿಂದ ಜಾತಕದಲ್ಲಿ ವೃಷಭರಾಶಿ ದೂಷಿತವಿರುತ್ತದೆ. ಇದರಂತೆ ಈ ರೋಗದಲ್ಲಿ ಫುಪ್ಪುಸಗಳು ದೂಷಿತವಿರುತ್ತವೆ. ಫುಪ್ಪುಸಗಳ ಮೇಲೆ ಮಿಥುನ ರಾಶಿಯ ಆಧಿಪತ್ಯವಿರುವರಿಂದ ಮಿಥುನ ರಾಶಿಯೂ ದೂಷಿತವಿರುತ್ತದೆ. ಇದಲ್ಲದೆ ಆಮಾಶಯ ಹಾಗೂ ಎದೆಯ ಸ್ಥಾನಗಳು ದೂಷಿತವಿರುತ್ತವೆ. ಆಮಾಶಯ ಹಾಗೂ ಎದೆಯ ಮೇಲೆ ಕರ್ಕ ರಾಶಿಯ ಆಧಿಪತ್ಯವಿರುವದರಿಂದ ಕರ್ಕ ರಾಶಿಯೂ ದೂಷಿತವಿರುತ್ತದೆ. ಆದುದರಿಂದ ಮಿಥುನ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ಲಗ್ನದವರೇ ಈ ರೋಗದಿಂದ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಶ್ವಾಸನಲಿಕೆಯ ಸ್ಥಾನವೂ ಉದಕ, ಅನ್ನವಹ, ಶ್ರೋತಸ್ಸಿನ ಸ್ಥಾನವೂ ಆದ ದ್ವಿತೀಯ ಸ್ಥಾನವು. ಫುಪ್ಪುಸ, ಆಮಾಶಯ, ಎದೆ, ಸ್ಥಾನವಾದ ಚತುರ್ಥಸ್ಥಾನವು ಈ ರೋಗದ ಕಾರಕಸ್ಥಾನಗಳು. ಆದುದರಿಂದ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ದೂಷಿತರಿರದೆ ಯಾರಿಗೂ ಈ ರೋಗವು ಬರಲಾರದು.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ರಾಶಿಯವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ಯೋಗಗಳು :—** ಈ ಕೆಳಗಿನ ಏಳು ಯೋಗಗಳಲ್ಲಿ ಜನಿಸಿದ ಜಾತಕನಿಗೆ ದಮ್ಮಿನ ವಿಕಾರ ಬರುತ್ತದೆ.

೧) ಶನಿಯಿಂದ ನೋಡಲ್ಪಟ್ಟ ಚಂದ್ರನು ಲಗ್ನ, ದ್ವಿತೀಯ, ಚತುರ್ಥ, ಷಷ್ಠ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ,

೨) ಶನಿ, ಚಂದ್ರರ ಸಮಸಪ್ತಕವು ದ್ವಿತೀಯ ಅಷ್ಟಮದಲ್ಲಿದ್ದರೆ,

೩) ದ್ವಾದಶದಲ್ಲಿ ಶನಿಯೂ, ದ್ವಿತೀಯದಲ್ಲಿ ಚಂದ್ರನೂ ಇದ್ದರೆ,

೪) ಷಷ್ಠದಲ್ಲಿ ಶನಿಯೂ, ಅಷ್ಟಮದಲ್ಲಿ ಚಂದ್ರನೂ ಇದ್ದರೆ,

೫) ಚತುರ್ಥದಲ್ಲಿ ಚಂದ್ರ, ದಶಮದಲ್ಲಿ ಶನಿ ಇದ್ದರೆ,

೬) ದ್ವಿತೀಯದಲ್ಲಿ ಚಂದ್ರ, ಅಷ್ಟಮದಲ್ಲಿ ಬುಧ ಇದ್ದರೆ,

೭) ಚತುರ್ಥದಲ್ಲಿ ಚಂದ್ರ, ದಶಮದಲ್ಲಿ ಬುಧ ಇದ್ದರೆ.

## ದಮ್ಮಿನಲ್ಲಿಯ ಪ್ರಕಾರಗಳು

ದಮ್ಮಿನಲ್ಲಿ ಎರಡು ಪ್ರಕಾರಗಳಿವೆ. ೧) ಶ್ವಸನಾತ್ಮಕ (Respiratory); ೨) ಹೃದಯ ದೌರ್ಬಲ್ಯ ಜನ್ಯ (Cardiac) ಈ ಎರಡೂ ಪ್ರಕಾರದ ರೋಗಗಳಿಗೆ ಕಾರಕ ಲಗ್ನ, ಸ್ಥಾನಗಳು ಭಿನ್ನ ಭಿನ್ನವಿರುತ್ತದ. ಅವುಗಳ ವಿವರಣೆ ಈ ಕೆಳಗಿನಂತಿದೆ:

**ಹೃದಯ ದೌರ್ಬಲ್ಯಜನ್ಯ :** ಇದು ಅತ್ಯಂತ ತೀವ್ರತರವಿರುತ್ತದೆ. ಆದರೆ ಪ್ರಾಣಹರಣದಾಯಕವಿರುವದಿಲ್ಲ. ರೋಗಿಯು ಜೀವನ ತುಂಬ ಈ ರೋಗದಿಂದ ತೊಳಲಾಡುತ್ತಿರುತ್ತಾನೆ.

ಮಿಥುನ, ಕರ್ಕ, ಸಿಂಹ ಈ ರಾಶಿಗಳೇ ದೂಷಿತವಿರುತ್ತವೆ. ಆದುದರಿಂದ ಕರ್ಕ, ಸಿಂಹ, ಕನ್ಯಾ, ಧನು, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವರು.

**ಯೋಗಗಳು**

೧) ಜಲರಾಶಿಯ ಚಂದ್ರ-ಶನಿಯರ ಯುತಿ ಇಲ್ಲವೆ ಪ್ರತಿಯೋಗವು ದ್ವಿತೀಯ, ವ್ಯಯ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ,

೨) ಕುಂಭರಾಶಿಯ ಶನಿ-ಚಂದ್ರರ ಯುತಿಯೋಗ ಇಲ್ಲವೆ ಪ್ರತಿಯೋಗ ಷಷ್ಠ, ಅಷ್ಟಮದಲ್ಲಿದ್ದರೆ,

೩) ಕರ್ಕರಾಶಿಯಲ್ಲಿ ಶನಿ ಬುಧರು, ಸಿಂಹದಲ್ಲಿ ರವಿಯು, ಮಿಥುನದಲ್ಲಿ ಮಂಗಳನು ಇದ್ದರೆ,

ಈ ವಿಕಾರ ಉಂಟಾಗುತ್ತದೆ.

**ಶ್ವಸನಾತ್ಮಕ :—** ಈ ರೋಗದಲ್ಲಿ ಕೇವಲ ಮಿಥುನರಾಶಿ ಹಾಗೂ ವೃಷಭ ರಾಶಿ ದೂಷಿತವಿರುವದರಿಂದ ಉಂಟಾಗುತ್ತದೆ. ಆದುದರಿಂದ ಮಿಥುನ, ಕರ್ಕ, ತುಲಾ, ಧನು, ಮಕರ ಈ ಲಗ್ನದರೇ ಹೆಚ್ಚಾಗಿ ಈ ರೋಗ

ದಿಂದ ಬಳಲುತ್ತಾರೆ. ಜಲರಾಶಿಯವರಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯವರಿಗೂ ಹಾಗೂ ವೃಷಭ, ಮಿಥುನ ಈ ರಾಶಿಯವರಿಗೂ ಇದರ ಉಪದ್ರವ ಬಹಳ.

## ೨೫. ಹೃದ್ರೋಗ (Heart disease)
## ಹೃದಯವಿಕಾರ

ಅನೇಕ ರೋಗಿಗಳು ಹೃದ್ರೋಗದ ಹೆಸರು ಕೇಳದೊಡನೆಯೇ ಎದೆ ಕಳಕೊಳ್ಳುತ್ತಾರೆ. ಅಂದಬಳಿಕ ಈ ರೋಗ ಎಷ್ಟು ಭಯಾತ್ಮಕ ಎಂಬುದರ ಕಲ್ಪನೆ ಬರದೇ ಇರಲಾರದು.

ಅತಿ ಶ್ರಮವಾಗುವದರಿಂದಲೂ ಹೃದಯಕ್ಕೆ ಆಘಾತ, ಪೆಟ್ಟು ಬೀಳುವದರಿಂದಲೂ ಅಧ್ಯಶನ— ಚಿಂತೆಯಿಂದಲೂ ಭಯ, ಶೋಕ ಸಂತಾಪಾದಿ ಮಾನಸಿಕ ವಿಕಾರಗಳಿಂದಲೂ ಹೃದಯವಿಕಾರವುಂಟಾಗುತ್ತದೆ. ಇದಲ್ಲದೆ ಜಲೋದರ, ಪಾಂಡುತೆ, ಕಾಮಣಿ, ಬ್ಲಡ್‌ಪ್ರೆಶರ್, ಆಮವಾತ, ವಾತರಕ್ತ, ಬಸ್ತಿ ಹಾಗೂ ಯಕೃತ್ ವಿಕಾರ ಈ ಮೊದಲಾದ ರೋಗವಿಕಾರಗಳಲ್ಲಿಯೂ ಹೃದಯವಿಕಾರವಾಗುತ್ತದೆ. ಆದುದರಿಂದ ಈ ರೋಗದ ವಿಷಯವಾಗಿ ಜ್ಯೋತಿಷ್ಯದ ಭಾಷ್ಯ ಏನು ? ಕಾರಕ ಲಗ್ನ, ರಾಶಿ, ಗ್ರಹ, ಸ್ಥಾನಾದಿಗಳಾವವು ಎಂಬುದು ಸಮಸ್ಯೆಯೇ !

**ಕಾರಕಗ್ರಹ :—** ಈ ರೋಗದ ಕಾರಕಗ್ರಹವೆಂದರೆ **ರವಿಯು.** ಏಕೆಂದರೆ ಹೃದಯದ ಮೇಲೆ ಹಾಗೂ ರಕ್ತದ ಮೇಲೆ ರವಿಯ ಪ್ರಭಾವವಿರುತ್ತದೆ. ರವಿ ದೂಷಿತನಿರದೆ ಯಾರಿಗೂ ಈ ರೋಗ ಬರಲಾರದು.

**ಕಾರಕಲಗ್ನ :—** ಹೃದಯದ ಮೇಲೆ ಸಿಂಹರಾಶಿಯ ಆಧಿಪತ್ಯವಿರುವದರಿಂದ ಜಾತಕದಲ್ಲಿ ಸಿಂಹರಾಶಿಯು ದೂಷಿತವಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು. ಆದುದರಿಂದ ವೃಷಭ, ಸಿಂಹ, ಕನ್ಯಾ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

ಹೃದಯ ವಿಕಾರವಾಗುವದೆಂದರೆ ಶುದ್ಧರಕ್ತದ ಪೂರೈಕೆ ಶರೀರಕ್ಕೆ ಆಗದಿರುವಿಕೆ ಅರ್ಥಾತ್ ರಕ್ತದ ಪೂರೈಕೆ ನಿಲ್ಲುವ ಕ್ರಿಯೆಯು. ಈ ರಕ್ತದ ಪೂರೈಕೆಯ ಕಾರ್ಯ ಕುಂಭರಾಶಿಯ ಗುಣಧರ್ಮವಿರುತ್ತದೆ. ಜಾತಕದಲ್ಲಿ

ಕುಂಭರಾಶಿ ದೂಷಿತವಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು. ಆದು ದರಿಂದ ಕರ್ಕ, ವೃಶ್ಚಿಕ, ಮೇಷ ಈ ಲಗ್ನದವರೂ ಸಹ ಈ ರೋಗದ ಭೀತಿ ಯುಳ್ಳವರಿರುತ್ತಾರೆ.

**ಸ್ಥಾನ**

೧) ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನಾಲ್ಕು ಸ್ಥಾನಗಳನ್ನು ಪರಿಶೀಲಿಸಬೇಕು. ಹೃದಯಸ್ಥಾನವೆಂದರೆ, ಚತುರ್ಥ ಸ್ಥಾನವು. ಆದುದ ರಿಂದ ಚತುರ್ಥಸ್ಥಾನವೇ ಈ ರೋಗದ ಕಾರಕವು.

೨) ಚತುರ್ಥದ ನಂತರ ದಶಮ ಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ದಶಮ ಸ್ಥಾನವು ಚತುರ್ಥದ ಸಪ್ತಮಸ್ಥಾನವಿರುವದರಿಂದ ದಶಮ ದಲ್ಲಿದ್ದ ಗ್ರಹಗಳ ಪರಿಣಾಮವು ಚತುರ್ಥದ ಮೇಲೆಯೂ ಆಗುತ್ತದೆ.

೩) ಚತುರ್ಥ, ದಶಮದ ನಂತರ ಅಷ್ಟಮ ಸ್ಥಾನವನ್ನೂ ಪರಿಶೀಲಿಸ ಬೇಕು. ಏಕೆಂದರೆ ಹೃದಯವಿಕಾರದಿಂದ ತೀವ್ರ ಮೃತ್ಯುಹೊಂದುವವರಿಗೆ ಅಲ್ಪಾಯುಕರ ಸ್ಥಾನವಾದ ಅಷ್ಟಮ ಸ್ಥಾನವನ್ನು ಪರಿಶೀಲಿಸಬೇಕು.

೪) ಯಕೃತ್ ದೋಷದಿಂದ ಹೃದಯವಿಕಾರವುಂಟಾಗುವದರಿಂದ ಪಂಚಮಸ್ಥಾನವನ್ನೂ ಪರಿಶೀಲಿಸಬೇಕು.

೫) ಶೋಕ, ಭಯ, ಮೊದಲಾದ ಮಾನಸಿಕ ವಿಕಾರಗಳಿಂದ ಹೃದಯ ವಿಕಾರವನ್ನು ಹೊಂದುವವರಿಗೆ ತನುಸ್ಥಾನವೂ ಕಾರಕವಿರುತ್ತದೆ. ಮೇಲ್ಕಂಡ ಐದು ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ದೂಷಿತವಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಪಿತ್ತಪ್ರಕೃತಿಯ ರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿಗೂ ಬುದ್ಧಿಜೀವಿಗಳ ರಾಶಿಗಳಾದ ಮಿಥುನ, ತುಲಾ, ಕುಂಭ ಈ ರಾಶಿಯವರಿಗೂ ಈ ರೋಗದ ಭೀತಿ ಬಹಳ.

**ಯೋಗಗಳು :—** ಈ ಕೆಳಗಿನ ಎಂಟು ಯೋಗಗಳಲ್ಲಿ ಜನಿಸಿದವ ರಿಗೆ ಈ ರೋಗದ ಭೀತಿ ಬಹಳ.

೧) ಅನೇಕ ಗ್ರಹಗಳು ಚತುರ್ಥ ಇಲ್ಲವೆ ದಶಮದಲ್ಲಿದ್ದರೆ,

೨) ಪಾಪಗ್ರಹಗಳಾದ ರವಿ, ಮಂಗಳ, ಶನಿ, ರಾಹು ಈ ಗ್ರಹಗಳು ಚತುರ್ಥ, ದಶಮದಲ್ಲಿದ್ದರೆ,

೩) ಶನಿ–ಮಂಗಳ, ರವಿ–ಶನಿ, ರವಿ–ಕೇತು, ಶನಿ–ಚಂದ್ರ ಇವರ ಯುತಿ ಯೋಗವು–ಪ್ರತಿಯೋಗವು ಚತುರ್ಥ, ದಶಮದಲ್ಲಿದ್ದರೆ,

೪) ರವಿ, ಚಂದ್ರ, ಲಗ್ನೇಶ ಹಾಗೂ ಷಷ್ಠೇಶ ಮತ್ತು ಅಷ್ಟಮೇಶ ಇವರು ದುರ್ಬಲರಿದ್ದರೆ,

೫) ಅನೇಕ ಪಾಪಗ್ರಹಗಳ ದೃಷ್ಟಿ ಚತುರ್ಥದಲ್ಲಿದ್ದರೆ,

೬) ಅನೇಕ ಪಾಪಗ್ರಹಗಳು ಸಿಂಹರಾಶಿಯವಾಗಿ ಷಷ್ಠ–ಅಷ್ಟಮ ವ್ಯಯ ಈ ಸ್ಥಾನಗಳಲ್ಲಿದ್ದರೆ,

೭) ಮಕರಲಗ್ನವಿದ್ದು, ಶನಿಯು ಚತುರ್ಥ ಇಲ್ಲವೆ ಅಷ್ಟಮದಲ್ಲಿದ್ದು ಮಂಗಳನು ಲಗ್ನ ಇಲ್ಲವೆ ಪಂಚಮ, ದಶಮದಲ್ಲಿದ್ದರೆ; ವೃಷಭ ಲಗ್ನವಿದ್ದು, ಷಷ್ಠದಲ್ಲಿ ರವಿಯೂ, ವ್ಯಯದಲ್ಲಿ ಶನಿಯೂ ಇದ್ದರೆ,

೮) ಕರ್ಕ, ವೃಶ್ಚಿಕ, ಸಿಂಹ, ಮೇಷ ಈ ರಾಶಿಯ ಚತುರ್ಥದಲ್ಲಿ ಶನಿ–ಚಂದ್ರರ ಯುತಿಯಿದ್ದರೆ ಇಂಥ ಜನರ (Palpitation) ಹೃದಯವಿಕಾರ ಅಥವಾ ಎದೆ ಧಡಧಡ ಆಗುವಿಕೆ ಮೇಲಿಂದ ಮೇಲೆ ಆಗುತ್ತದೆ.

## ೨೬ ರಾಜಯಕ್ಷ್ಮ (Tuberculosis)

ರೋಗದ ಹೆಸರು ಕೇಳಿದಾಕ್ಷಣವೇ ಹೌಹಾರುವ ರೋಗವೆಂದರೆ ರಾಜಯಕ್ಷ್ಮವನ್ನು ಬಿಟ್ಟು ಬೇರಾವ ರೋಗವೂ ಇಲ್ಲ. ಇದಕ್ಕೆ "ಕ್ಷಯ"ವೆಂದು ಇನ್ನೊಂದು ಹೆಸರು. ಆದರೆ ಹೆಚ್ಚಾಗಿ ಟಿ. ಬಿ. ಎಂದೇ ಪ್ರಚಲಿತದಲ್ಲಿದೆ.

**ಕ್ಷಯದಲ್ಲಿಯ ಪ್ರಕಾರಗಳು:—** ಕ್ಷಯದಲ್ಲಿ ಅನೇಕ ಪ್ರಕಾರಗಳುಂಟು. ಪುಪ್ಪುಸಗತಕ್ಷಯ, ಅಸ್ಥಿಕ್ಷಯ (Bone T.B. , ಗ್ರಂಥಿಕ್ಷಯ (Gland T B.), ಸಂಧಿಕ್ಷಯ (Joint T.B.) ಬೆನ್ನೆಲುವಿನ ಕ್ಷಯ (Spinal T.B.) ಹೀಗೆ ಆಯಾ ಅವಯವಗಳ ವಿಕೃತಿ (ದುಷ್ಟ)ಗಳಿಗನುಗುಣವಾಗಿ ಕ್ಷಯದಲ್ಲಿಯ ಪ್ರಕಾರಗಳನ್ನು ವಿಂಗಡಿಸಲಾಗಿದೆ. ಇವುಗಳೆಲ್ಲವುಗಳ ವಿವೇಚನೆಯನ್ನು ಜ್ಯೋತಿಶ್ಶಾಸ್ತ್ರದ ರೀತ್ಯಾ ವಿವರಿಸಲಾಗಿದೆ.

**ಪುಪ್ಫುಸಗತ ಕ್ಷಯ :**— (Lung T. B.) ಸಾಮಾನ್ಯವಾಗಿ ಈ ಕ್ಷಯವೇ ಎಲ್ಲರನ್ನೂ ಬಾಧಿಸುವ ಭಯಾನಕ ರೋಗವು. ಇದಕ್ಕೆ ರಾಜ ಯಕ್ಷ್ಮ, ಟಿ, ಬಿ. ಎಂದು ಕರೆಯುತ್ತಾರೆ. ಈ ರೋಗದಲ್ಲಿ ಪುಪ್ಫುಸಗಳು ಸವೆದು ಇಲ್ಲವೆ ಪುಪ್ಫುಸಗಳಲ್ಲಿ ದೋಷವುಂಟಾಗಿ ಈ ರೋಗ ಪ್ರಾರಂಭ ವಾಗುತ್ತವೆ.

**ಕಾರಕಗ್ರಹ :**— ಪ್ರಪ್ರಥಮವಾಗಿ ಈ ರೋಗವು ಚಂದ್ರನಿಗೆ ಆರಂಭವಾಯಿತೆಂದು ಪುರಾಣದಲ್ಲಿ ಉಲ್ಲೇಖಿಸಲಾಗಿದೆ. ಪುಪ್ಫುಸದಲ್ಲಿ ದೋಷವಿರುವದೇ ಈ ರೋಗದ ಮುಖ್ಯ ಲಕ್ಷಣ. ಇದಲ್ಲದೆ ಕಾಸವನ್ನು ಉಪೇಕ್ಷೆಮಾಡಿದರೆ ಕ್ಷಯವುಂಟಾಗುವದೆಂದು ವೈದ್ಯ ಶಾಸ್ತ್ರಜ್ಞರ ಅಭಿಮತ. ಪುಪ್ಫುಸ ಇದು ಕಫಸ್ಥಾನವಿರುತ್ತದೆ; ಕಾಸವೂ ಕೂಡ ಕಫಸ್ಥಾನದಲ್ಲಿಯೇ ಇರುತ್ತದೆ. ಆದುದರಿಂದ ಈ ರೋಗದ ಪ್ರಧಾನ ದೋಷವೆಂದರೆ ಕಫವು. ಆದುದರಿಂದ ಚಂದ್ರನೇ ಈ ರೋಗದ ಕಾರಕನು. ಚಂದ್ರನು ದೂಷಿತ ನಿರದೆ ಯಾರಿಗೂ ಈ ರೋಗ ಬರಲಾರದು.

**ಕಾರಕಸ್ಥಾನ :**— ಪುಪ್ಫುಸಗಳ ಮೇಲಿನ ತುದಿಗಳ ವಿಕೃತವಾಗುವದೇ ಈ ರೋಗದ ಲಕ್ಷಣವಿರುವದರಿಂದ ಚತುರ್ಥಸ್ಥಾನವೇ ಈ ರೋಗದ ಕಾರಕವು. ಆದುದರಿಂದ ಚತುರ್ಥಸ್ಥಾನ, ಚತುರ್ಥೇಶ ಇವರು ದೂಷಿತ ರಿರದೆ ಯಾರಿಗೂ ಈ ರೋಗ ಬರಲಾರದು.

**ಲಗ್ನ :**— ಪುಪ್ಫುಸದ ಮೇಲೆ ಮಿಥುನರಾಶಿಯ ಆಧಿಪತ್ಯವಿರುತ್ತದೆ. ಇದಲ್ಲದೆ ಪಕ್ಕೆಲವುಗಳೂ ವಿಕೃತವಾಗುತ್ತವೆ. ಆದುದರಿಂದ ಪಕ್ಕೆಲವು ಹಾಗೂ ಪುಪ್ಫುಸದ ರಾಶಿಯಾದ ಮಿಥುನರಾಶಿಯು ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಇದರಂತೆಯೇ ಎದೆಯ ಮೇಲೆ ಕರ್ಕರಾಶಿಯ ಪ್ರಭಾವವಿರುತ್ತದೆ. ಈ ರೋಗದಲ್ಲಿ ಎದೆಯಲ್ಲಿಯೂ ವಿಕೃತವಿರುತ್ತದೆ. ಆದುದರಿಂದ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ, ಮೀನ ಈ ಲಗ್ನದ ಜಾತಕದವರೇ ಈ ರೋಗದಿಂದ ಬಳಲುವದು ಕಂಡು ಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ರಾಶಿಯವರೇ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ಗ್ರಂಥಿಕ್ಷಯ (Gland T.B.):—** ಈ ತರಹದ ಕ್ಷಯರೋಗದಲ್ಲಿ ಕುತ್ತಿಗೆಯಲ್ಲಿಯ ಗಂಟುಗಳು ಬೆಳೆಯುತ್ತವೆ. ಇದಕ್ಕೆ "ಗಂಡಮಾಲೆ" ಅಥವಾ "ಅಪಚಿ" ಎನ್ನುವರು. ಹೊಟ್ಟೆಯಲ್ಲಿಯ ಲಸಿಕಾಗ್ರಂಥಿಗಳು ದುಷ್ಟವಾಗಿ ಗಂಟುಗಳೇವವು. ಕ್ಷಯದ ಕ್ರಿಮಿಗಳು ಇದರಲ್ಲಿ ಬೆಳೆಯುವವು. ಇದೇ ಈ ರೋಗದ ಲಕ್ಷಣವು.

**ಸ್ಥಾನ :—** ಗಂಟಲಿನ ಸ್ಥಾನವಾದ ದ್ವಿತೀಯ ಸ್ಥಾನವೇ ಈ ರೋಗದ ಕಾರಕಸ್ಥಾನವಿರುತ್ತದೆ. ಆದುದರಿಂದ ದ್ವಿತೀಯಸ್ಥಾನ ಹಾಗೂ ದ್ವಿತೀಯೇಶ ಇವರು ದೂಷಿತರಿರದೆ ಯಾರಿಗೂ ಈ ರೋಗ ಬರಲಾರದು.

**ಲಗ್ನ :—** ಗಂಟಲಿನ ಮೇಲೆ ವೃಷಭರಾಶಿಯ ಆಧಿಪತ್ಯವಿರುತ್ತದೆ. ಆದುದರಿಂದ ವೃಷಭರಾಶಿ ದೂಷಿತವಿರದೆ ಈ ರೋಗ ಬರಲಾರದು. ಆದ್ದರಿಂದ ಮೇಷ, ಮಿಥುನ, ತುಲಾ, ಧನು ಈ ಲಗ್ನದವರೇ ಈ ರೋಗದಿಂದ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ಕಾರಕಗ್ರಹ :—** ಕುತ್ತಿಗೆಯ ಮೇಲೆ ಗಂಟುಗಳೇಳುವದು (ಗಂಡಮಾಲೆ ಬೆಳೆಯುವದು), ನೋವು, ಹೊಡೆತ, ಮುಂದೆ ಗಂಟುಗಳು ಒಡೆಯುವಿಕೆ ಈ ಎಲ್ಲ ಲಕ್ಷಣಗಳು ಪಿತ್ತಪ್ರಧಾನ ದೋಷವನ್ನು ಪ್ರದರ್ಶಿಸುತ್ತವೆ. ಆದ್ದರಿಂದ ಮಂಗಳನೇ ಈ ರೋಗದ ಕಾರಕನು.

**ಅಸ್ಥಿಕ್ಷಯ:— (Bone T. B.):—** ಮೈಯಲ್ಲಿಯ ಕ್ಯಾಲ್ಸಿಯಂ ಅಂದರೆ ಸುಣ್ಣದ ಪ್ರಮಾಣ ಕಡಿಮೆಯಾಗಿ ಈ ರೋಗ ಉಂಟಾಗುತ್ತದೆ. ಈ ರೋಗ ಹೆಚ್ಚಾಗಿ ಸಣ್ಣಮಕ್ಕಳಿಗೂ, ಬಾಣಂತಿಯರಿಗೂ ಬಹಳ ಬರುತ್ತದೆ.

**ಕಾರಕಸ್ಥಾನ:—** ಎಲವುಗಳಲ್ಲಿ ಬಾವು, ಶೂಲ, ಜ್ವರದಿಂದೆ ನಿಶ್ಶಕ್ತರಾಗಿ ತೂಕವು ಇಳಿಯುತ್ತ ಹೋಗುತ್ತದೆ. ಪಕ್ಕೆಲವು, ಕೈಕಾಲುಗಳ ಎಲವು, ಬೆನ್ನುಹುರಿ ಈ ಸ್ಥಾನಗಳಲ್ಲಿ ಇದರ ದೋಷ ವಿಶೇಷವಾಗಿರುವದರಿಂದ ಚತುರ್ಥಸ್ಥಾನವೇ ಈ ರೋಗದ ಕಾರಕಸ್ಥಾನವು.

**ಕಾರಕಲಗ್ನ:—** ಪಕ್ಕೆಲವು ಹಾಗೂ ಕೈಗಳ ಮೇಲೆ ಮಿಥುನರಾಶಿಯ ಪ್ರಭಾವವಿರುತ್ತದೆ. ಕಾಲುಗಳ ಮೇಲೆ ಮೀನರಾಶಿಯ ಪ್ರಭಾವವಿರುತ್ತದೆ. ಮಿಥುನ, ಮೀನ ಈ ರಾಶಿಗಳು ದೂಷಿತವಿರದೆ ಯಾರಿಗೂ ಈ ರೋಗವು ಬರಲಾರದು. ಆದುದರಿಂದ ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ಕಾರಕಗ್ರಹ :—** ಅಸ್ಥಿಯ ಮೇಲೆ ರವಿಯ ಪ್ರಭಾವವಿರುವದರಿಂದ ರವಿಯೇ ಈ ರೋಗದ ಕಾರಕನು. ಆದ್ದರಿಂದ ರವಿಯು ದೂಷಿತನಿರದೆ ಯಾರಿಗೂ ಈ ರೋಗವು ಬರಲಾರದು.

**ಸಂಧಿಕ್ಷಯ** (Joint T. B.) :— ಶರೀರದ ಸಂದುಗಳು ದುಷ್ಟವಾಗಿ ಕ್ಷಯದ ಕ್ರಿಮಿಗಳು ಸಂದುಗಳಲ್ಲಿ ಸೇರಿ ದೋಷವುಂಟಾಗಿ ಕ್ಷಯರೋಗ ಪ್ರಾರಂಭವಾಗುತ್ತದೆ.

**ಕಾರಕಲಗ್ನ :—** ಸಂಧಿ ಎಲವುಗಳ ಮೇಲೆ ಮಕರರಾಶಿಯ ಪ್ರಭಾವ ವಿರುತ್ತದೆ. ಅದರಲ್ಲಿಯೂ ಮೊಳಕಾಲದಲ್ಲಿಯ ಸಂಧಿ ಹಾಗೂ ಮಂಡಿ (ಚಿಪ್ಪು)ಗಳ ಮೇಲೆ ಮಕರರಾಶಿಯ ಪ್ರಭಾವವಿರುತ್ತದೆ. ಆದುದರಿಂದ ಮಕರರಾಶಿ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದ ರಿಂದ ಮಿಥುನ, ಸಿಂಹ, ಕುಂಭ ಈ ಲಗ್ನದವರೇ ಹೆಚ್ಚಾಗಿ ಬಳಲುತ್ತಾರೆ. ಇದರಂತೆ ಗೆಜ್ಜೆಯ ಮೇಲೆ ತುಲಾರಾಶಿಯ ಪ್ರಭಾವವಿರುತ್ತದೆ. ಗೆಜ್ಜೆಯಲ್ಲಿಯೂ ವಿಕಾರವುಂಟಾಗುತ್ತದೆ. ಆದ್ದರಿಂದ ವೃಷಭ, ವೃಶ್ಚಿಕ, ಮೀನ ಈ ಲಗ್ನದ ವರೂ ಸಹ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ಸ್ಥಾನ:—** ಮೊಳಕಾಲ ಸಂಧಿ, ಗೆಜ್ಜೆಯ ಸಂದುಗಳಲ್ಲಿ ಈ ರೋಗದ ವಿಕಾರ ವಿಶೇಷವಾಗಿರುತ್ತದೆ. ಆದುದರಿಂದ ಗೆಜ್ಜೆಯ ಸ್ಥಾನವಾದ ಸಪ್ತಮ ಸ್ಥಾನವೂ, ಮೊಳಕಾಲು ಸ್ಥಾನವಾದ ದಶಮಸ್ಥಾನವೂ ಈ ರೋಗದ ಕಾರಕ ಸ್ಥಾನಗಳಿರುತ್ತವೆ.

**ಕಾರಕಗ್ರಹ:—** ಈ ರೋಗ ವಾತ-ಕಫ ದೂಷಿತವಿರುವದರಿಂದ ಶುಕ್ರನೇ ಈ ರೋಗದ ಕಾರಕನು.

**ಬೆನ್ನೆಲವಿನ ಕ್ಷಯ** (Spinal T. B.):— ಬೆನ್ನೆಲವಿನಲ್ಲಿ ಕ್ಷಯ ರೋಗ ಉಂಟಾಗಿ ಬೆನ್ನೆಲವು ನೋಯುತ್ತದೆ, ಸಣ್ಣದಾಗುತ್ತವೆ, ಸವೆಯುತ್ತದೆ, ಹುಳುಕಾಗಿ ಡೊಂಕಾಗುತ್ತದೆ. ಇದೇ ಈ ರೋಗದ ಲಕ್ಷಣವು.

**ಕಾರಕಗ್ರಹ**:— ಬೆನ್ನೆಲವಿನ ಮೇಲೆ ರವಿಯ ಪ್ರಭಾವವಿರುವದರಿಂದಲೂ, ಈ ರೋಗ ಪಿತ್ತಪ್ರಧಾನ ದೋಷವಿರುವದರಿಂದಲೂ ರವಿಯೇ ಈ ರೋಗದ ಕಾರಕನು. ರವಿಯು ದೂಷಿತನಿರದೆ ಯಾರಿಗೂ ಈ ರೋಗವು ಬರುವದಿಲ್ಲ.

**ಲಗ್ನ**:— ಬೆನ್ನೆಲವಿನ ಮೇಲೆ ಸಿಂಹರಾಶಿಯ ಆಧಿಪತ್ಯವಿರುತ್ತದೆ. ಸಿಂಹರಾಶಿ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮೇಷ, ವೃಷಭ, ಕನ್ಯಾ, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ಕಾರಕಸ್ಥಾನ**:— ಚತುರ್ಥಸ್ಥಾನವಿದು ಬೆನ್ನೆಲುವಿನ ಸ್ಥಾನವಿರುತ್ತದೆ. ಆದುದರಿಂದ ಚತುರ್ಥಸ್ಥಾನವೇ ಈ ರೋಗದ ಕಾರಕಸ್ಥಾನವು.

## ಎಲ್ಲ ಪ್ರಕಾರದ ಕ್ಷಯರೋಗಗಳ ಯೋಗಗಳು

೧) ರೋಗಸ್ಥಾನವಾದ ಷಷ್ಠದಲ್ಲಿ ರಾಹು ಇದ್ದು, ಲಗ್ನಾಧಿಪತಿ ದುರ್ಬಲನಾಗಿ ಅಷ್ಟಮದಲ್ಲಿದ್ದರೆ ವಯಸ್ಸಿನ ೨೭-೨೮ ರಲ್ಲಿ ಕ್ಷಯರೋಗ ಉಂಟಾಗುತ್ತದೆ.

೨) ಷಷ್ಠದಲ್ಲಿ ಬುಧನು ಕುಜನೊಂದಿಗೆ ಇದ್ದು, ಚಂದ್ರನೊಂದಿಗೆ ನೋಡಲ್ಪಡುತ್ತಿದ್ದರೆ, ಅಥವಾ ಕುಜನ ದೃಷ್ಟಿ ಚಂದ್ರನ ಮೇಲಿದ್ದರೆ ಕ್ಷಯ ರೋಗವುಂಟಾಗುತ್ತದೆ.

೩) ಚಂದ್ರ-ಶುಕ್ರ, ಚಂದ್ರ-ಮಂಗಳ, ಶುಕ್ರ-ಮಂಗಳ, ಶುಕ್ರ-ಶನಿ ಇವರ ಯುತಿಯೋಗವು ಪಂಚಮ, ಸಪ್ತಮ, ಅಷ್ಟಮ, ವ್ಯಯ ಈ ಸ್ಥಾನದಲ್ಲಿದ್ದರೆ ಕ್ಷಯರೋಗ ಉಂಟಾಗುತ್ತದೆ.

೪) ಶನಿ-ಮಂಗಳರು ಷಷ್ಠದಲ್ಲಿದ್ದು, ರವಿ ರಾಹುಗಳಿಂದ ನೋಡಲ್ಪಡುತ್ತಿದ್ದರೆ ಕ್ಷಯರೋಗವುಂಟಾಗುತ್ತದೆ.

೫) ಸೂರ್ಯನು ಕರ್ಕದಲ್ಲಿಯೂ, ಚಂದ್ರನು ಸಿಂಹ ರಾಶಿಯಲ್ಲಿಯೂ ಜನಿಸಿದ ಜಾತಕನಿಗೆ ಕ್ಷಯರೋಗ ಉಂಟಾಗುತ್ತದೆ.

೬) ಚಂದ್ರನು ಷಷ್ಠ, ಸಪ್ತಮ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿದ್ದು ಶನಿ ಇಲ್ಲವೆ ರಾಹುವಿನಿಂದ ನೋಡಲ್ಪಡುತ್ತಿದ್ದರೆ ಅಥವಾ ಶನಿ-ಚಂದ್ರ, ಚಂದ್ರ-ರಾಹುಗಳ ಯುತಿಯೋಗವು ಷಷ್ಠ, ಸಪ್ತಮ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿದ್ದರೆ ಕ್ಷಯರೋಗವುಂಟಾಗುತ್ತದೆ.

೭) ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು, ಮೀನ ಈ ರಾಶಿಗಳಲ್ಲಿ ಶನಿ ಇಲ್ಲವೆ ಮಂಗಳರು ಲಗ್ನ ಇಲ್ಲವೆ ಷಷ್ಠದಲ್ಲಿದ್ದು, ರಾಹು ಇಲ್ಲವೆ ರವಿಯೊಂದಿಗೆ ಅಶುಭಯೋಗ ಮಾಡುತ್ತಿದ್ದರೆ ಕ್ಷಯರೋಗವುಂಟಾಗುತ್ತದೆ.

೮) ಲಗ್ನದ ದ್ವಿತೀಯ, ದ್ವಾದಶದಲ್ಲಿ ರಾಹು ಇಲ್ಲವೆ ಕೇತುವಿದ್ದು, ಇನ್ನೊಂದರಲ್ಲಿ ಪಾಪಗ್ರಹವಿದ್ದು, ಲಗ್ನೇಶ ದುರ್ಬಲನಿದ್ದರೆ ಕ್ಷಯರೋಗ ಉಂಟಾಗುತ್ತದೆ.

೯) ಯಾವುದೇ ರಾಶಿಯ ಚಂದ್ರನು ದೂಷಿತನಾಗಿ ಷಷ್ಠ, ಸಪ್ತಮ, ಅಷ್ಟಮ, ವ್ಯಯದಲ್ಲಿದ್ದರೆ ಕ್ಷಯರೋಗ ಉಂಟಾಗುತ್ತದೆ.

೧೦) ಷಷ್ಠೇಶ ಇಲ್ಲವೆ ಅಷ್ಟಮೇಶರು ದ್ವಿಸ್ವಭಾವ ರಾಶಿಯಲ್ಲಿದ್ದು, ರಾಹು ಇಲ್ಲವೆ ಕೇತು ಲಗ್ನ, ದ್ವಿತೀಯ, ಷಷ್ಠ, ಅಷ್ಟಮ, ವ್ಯಯ ಈ ಯಾವದೇ ಒಂದು ಸ್ಥಾನದಲ್ಲಿದ್ದರೆ ಕ್ಷಯರೋಗ ಬರುತ್ತದೆ.

೧೧) ಕನ್ಯಾರಾಶಿಯು ಲಗ್ನ, ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನದಲ್ಲಿದ್ದು, ಈ ಸ್ಥಾನಗಳಲ್ಲಿಯ (ಕನ್ಯಾರಾಶಿಯ) ಯಾವದೇ ಎರಡು ಪಾಪಗ್ರಹಗಳೊಂದಿಗೆ ರಾಹು ಇದ್ದರೆ ಸಂಗ್ರಹಿಣಿಯಿಂದ ಕ್ಷಯವಾಗುವದು.

೧೨) ಧನುರಾಶಿಯ ಶನಿ ಇಲ್ಲವೆ ರಾಹು ಗ್ರಹಗಳು ಲಗ್ನ, ಷಷ್ಠ, ಅಷ್ಟಮದಲ್ಲಿದ್ದು, ಮಂಗಳನಿಂದ ನೋಡಲ್ಪಡುತ್ತಿದ್ದರೆ ಅಸ್ಥಿಕ್ಷಯ ಬರುವದು.

೧೩) ವೃಷಭ ಇಲ್ಲವೆ ವೃಶ್ಚಿಕ ರಾಶಿಗಳು ಲಗ್ನ, ಷಷ್ಠ, ಅಷ್ಟಮ ಸ್ಥಾನಗಳಲ್ಲಿದ್ದು, ಅಲ್ಲಿ ಶನಿ-ರಾಹು, ಶನಿ-ಕೇತು ಗ್ರಹಗಳಿದ್ದು, ಮಂಗಳನಿಂದ ನೋಡಲ್ಪಡುತ್ತಿದ್ದರೆ ಗಂಡಮಾಲಾಕ್ಷಯ ಉಂಟಾಗುತ್ತದೆ.

೧೪) ವೃಷಭರಾಶಿಯ ಚಂದ್ರನು ದ್ವಿತೀಯ ಸ್ಥಾನದಲ್ಲಿದ್ದು, ಶನಿ, ಮಂಗಳ, ರಾಹು ಇವರ ದೃಷ್ಟಿಯೋಗ ಇಲ್ಲವೆ ಯುತಿ-ಪ್ರತಿಯೋಗವಿದ್ದರೆ ಗಂಡಮಾಲಿ ಉಂಟಾಗುತ್ತದೆ.

೧೫) ಕರ್ಕರಾಶಿಯ ಮಂಗಳ ಇಲ್ಲವೆ ತುಲಾರಾಶಿಯ ರವಿ ಲಗ್ನ, ಚತುರ್ಥ, ಷಷ್ಠ, ಅಷ್ಟಮ, ದ್ವಾದಶ ಈ ಯಾವುದೊಂದು ಸ್ಥಾನದಲ್ಲಿದ್ದು, ಶನಿಯಿಂದ ನೋಡಲ್ಪಡುತ್ತಿದ್ದರೆ ಕಫಕ್ಷಯವಾಗುತ್ತದೆ.

೧೬) ಕೃಷ್ಣ ಪಂಚಮಿಯಿಂದ ಅಮಾವಾಸ್ಯೆಯವರೆಗೆ ಜನಿಸಿದವರಿಗೆ ಕ್ಷಯದ ಭೀತಿಯಿರುತ್ತದೆ.

೧೭) ಅಷ್ಟಮಸ್ಥಾನದಲ್ಲಿ ರಾಹು, ಶನಿಯರ ಯೋಗವಿದ್ದರೆ ವಯಸ್ಸಿನ ೨೮ ಕ್ಕೆ ಕ್ಷಯರೋಗ ಬರುತ್ತದೆ.

೧೮) ಷಷ್ಠದಲ್ಲಿ ಬುಧ-ಮಂಗಳರಿದ್ದು, ಶುಕ್ರ, ಚಂದ್ರರ ಅಶುಭ ಯೋಗವಿದ್ದರೆ ಕ್ಷಯರೋಗ ಬರುತ್ತದೆ.

೧೯) ಜಲರಾಶಿಯ ಚಂದ್ರನು ಲಗ್ನ, ಚತುರ್ಥ, ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನದಲ್ಲಿದ್ದು ಶನಿ, ರಾಹು, ಮಂಗಳರಿಂದ ನೋಡಲ್ಪಡುತ್ತಿದ್ದರೆ ಕ್ಷಯರೋಗ ಬರುತ್ತದೆ.

೨೦) ಹೆಚ್ಚಾಗಿ ಮೇಷ, ಸಿಂಹ, ಧನು ಈ ರಾಶಿಯವರಿಗೆ ಕ್ಷಯ ರೋಗ ಬರಲಾರದು.

೨೧) ಮೀನರಾಶಿಗೆ ಶರೀರದ ಸವಕಳಿ ಮಾಡುವ ಗುಣಧರ್ಮವಿರುತ್ತದೆ. ಜಾತಕದಲ್ಲಿ ಈ ರಾಶಿ ದೂಷಿತವಿದ್ದರೆ ಕ್ಷಯರೋಗ ಬರುತ್ತದೆ.

೨೨) ಮಿಥುನರಾಶಿಯ ಕ್ರಿಯೆಯು ಶ್ವಾಸೋಚ್ಛ್ವಾಸ ಹಾಗೂ ಪುಪ್ಪುಸದ ಮೇಲೆ ಇರುತ್ತದೆ. ಜಾತಕದಲ್ಲಿ ಈ ರಾಶಿ ದೂಷಿತವಿದ್ದರೆ ನಿಮೋನಿಯಾ, ಸಂಧಿವಾತ, ಕೆಮ್ಮು, ದಮ್ಮು, ಕ್ಷಯ ಈ ರೋಗಗಳುಂಟಾಗುತ್ತವೆ.

## ೨೭. ಪಾಂಡುರೋಗ (Anæmia)

ಪಾಂಡುರೋಗವೆಂದರೆ ಶರೀರದಲ್ಲಿಯ ರಕ್ತದ ಪ್ರಮಾಣವು ಕಡಿಮೆಯಾಗುವಿಕೆ ಅಥವಾ ರಕ್ತದಲ್ಲಿಯ ರಕ್ತದ್ರವ್ಯ-ಘಟಕಗಳ (Hemoglobin) ಕಡಿಮೆಯಾಗಿ ತೊಗಲಿಗೆ ಬಿಳೀಬಣ್ಣ ಬರುವ ಕ್ರಿಯೆಗೆ 'ಪಾಂಡುತ' ವೆನ್ನುವರು.

ಪಾಂಡುರೋಗವು ಸ್ವತಂತ್ರ ರೋಗಕ್ಕಿಂತ ಉಪದ್ರವ ರೂಪವಾಗಿ ಇಲ್ಲವೆ ಲಕ್ಷಣರೂಪವಾಗಿ ಬರುವದೇ ಹೆಚ್ಚು. ಉದಾಹರಣೆಗೆ ರಕ್ತಾತಿಸಾರ, ರಕ್ತಾರ್ಶ, ರಕ್ತಪಿತ್ತ, ಅಪಘಾತ, ಮೂಗು ಒಡೆಯುವಿಕೆ, ಆಂತ್ರವ್ರಣ, ಸ್ತ್ರೀಯರಲ್ಲಿ ಅತ್ಯಾರ್ತವ ಈ ವಿಕಾರಗಳಲ್ಲಿ ಉಪದ್ರವರೂಪವಾಗಿ ಬರುತ್ತದೆ. ಟಾಯ್‌ಫಾಯಡ್, ಸಂಧಿವಾತ, ಮಲೇರಿಯಾ, ಪ್ಲೇಗ, ನಿಮೋನಿಯಾ, ಸಂಗ್ರಹಣೆ, ಉಪದಂಶ, ಕ್ಷಯ, ಬಾಣಂತಿಬೇನೆ ಮೊದಲಾದ ದೀರ್ಘಾವಧಿ ವಿಕಾರಗಳಲ್ಲಿಯೂ ಕ್ರಿಮಿಗಳಿಂದಲೂ ಉಪದ್ರವ ರೂಪವಾಗಿ ಬರುತ್ತವೆ.

**ಕಾರಕಗ್ರಹ :—** ಈ ರೋಗದಲ್ಲಿ ಪಿತ್ತಪ್ರಧಾನ ದೋಷವಿರುವದರಿಂದ ರವಿ-ಮಂಗಳರೇ ಈ ರೋಗದ ಕಾರಕರು. ಸ್ವತಂತ್ರ ಪಾಂಡು ರೋಗದಲ್ಲಿ ರವಿ-ಮಂಗಳರು ದುರ್ಬಲರಿರುತ್ತಾರೆ. ಅರ್ಥಾತ್ ನೀಚರಾಶಿ, ಶತ್ರುಕ್ಷೇತ್ರಿಯರಿರುತ್ತಾರೆ. ಹೆಚ್ಚಾಗಿ ಕರ್ಕ, ವೃಶ್ಚಿಕ, ಮೀನ, ಮಿಥುನ, ತುಲಾ, ಕುಂಭ ಈ ರಾಶಿಯವರೇ ಇರುತ್ತಾರೆ.

ರಕ್ತಾತಿಸಾರ, ರಕ್ತಾರ್ಶ, ಗಾಯ, ಆಂತ್ರಿಕ ಸನ್ನಿಪಾತ ಮೊದಲಾದ ವಿಕಾರಗಳಿಂದ ಪಾಂಡುರೋಗ ಬರುವವರಿಗೆ ರವಿ-ಮಂಗಳರು ರಾಶಿಬಲದವರಿದ್ದು, ಶನಿ-ರಾಹುಗಳಿಂದ ದೃಷ್ಟಿಸಲ್ಪಟ್ಟ ಇಲ್ಲವೆ ಯುತಿಯಾಗಲ್ಪಟ್ಟವರಿರುತ್ತಾರೆ.

ನಿಮೋನಿಯಾ, ಸಂಗ್ರಹಿಣಿ, ಕ್ಷಯ ಮೊದಲಾದ ರೋಗಗಳಲ್ಲಿ ಉಪದ್ರವವಾಗಿ ಬರುವವರಿಗೆ ರವಿ-ಮಂಗಳರು ರಾಶಿಬಲದವರಿಂದ, ಸ್ಥಾನಬಲದವರಿರುತ್ತಾರೆ.

**ಕಾರಕಸ್ಥಾನ** :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ, ರಕ್ತ-ನ್ಯೂನತೆಯೇ ಪ್ರಧಾನ ಲಕ್ಷಣವಿರುವದರಿಂದ ರಕ್ತವಿಕೃತಿಯ ಸ್ಥಾನಗಳಾದ ಲಗ್ನ ಹಾಗೂ ಷಷ್ಠಸ್ಥಾನಗಳೇ ಈ ರೋಗದ ಕಾರಕಸ್ಥಾನಗಳು.

**ಕಾರಕಲಗ್ನ** :— ಕುಂಭರಾಶಿಯ ಪ್ರಭಾವವು ರಕ್ತದ ಮೇಲಿರುತ್ತದೆ. ಕುಂಭರಾಶಿಯು ದೂಷಿತವಿರದೆ ಯಾರಿಗೂ ಪಾಂಡುತ ಬರಲಾರದು. ಆದುದರಿಂದ ಕರ್ಕ, ಕನ್ಯಾ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ** :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರು ಎಂದು ಹೇಳಲು ಬಾರದು.

## ೨೮. ಕಾಮಣಿ (Jaundice)

### ಕಾಮಲಾ

ಕಾಮಣಿಯೆಂದರೆ ದೇಹವೆಲ್ಲ ಹಳದಿಯಾಗುವಿಕೆ— ಕಣ್ಣು, ನಾಲಿಗೆ, ಉಗುರು, ತ್ವಚೆ, ಮೂತ್ರ ಎಲ್ಲವೂ ಹಳದಿಯಾಗುವದು.

ಯಾವ ಪಾಂಡುರೋಗಿಯು ಪಿತ್ತಕರ ಪದಾರ್ಥವನ್ನು ಸೇವಿಸುತ್ತಾನೋ ಅವನ ಕೋಷ್ಠ ಮತ್ತು ಶಾಖೆಗಳಲ್ಲಿದ್ದ ಪಿತ್ತವು ರಕ್ತ-ಮಾಂಸಗಳನ್ನು ಸುಟ್ಟು ಕಾಮಣಿಯನ್ನು ಉಂಟುಮಾಡುತ್ತದೆಂದು ಆಯುರ್ವೇದ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಇನ್ನು ಈ ರೋಗದ ವಿಷಯವಾಗಿ ಫಲಜ್ಯೋತಿಷ್ಯದ ಭಾಷ್ಯವೇನು ಎಂಬುದನ್ನು ನೋಡೋಣ.

**ಕಾರಕಗ್ರಹ** :— ಈ ರೋಗದಲ್ಲಿ ಯಕೃತ್ತದಲ್ಲಿಯೇ ದೋಷವಿರುತ್ತದೆ. ಅದರಲ್ಲಿಯೂ ಪಿತ್ತನಾಳದಲ್ಲಿ ದೋಷವುಂಟಾಗಿ ಯಕೃತ್ತದ ಕಾರ್ಯ ಸರಿಯಾಗಿ ಆಗದಿರುವದೇ ಮುಖ್ಯ ಲಕ್ಷಣವಾಗಿದೆ. ಯಕೃತ್ತದ ಮೇಲೆ ಗುರುವಿನ ಆಧಿಪತ್ಯವಿರುತ್ತದೆ. ಇದಲ್ಲದೆ ಗುರು ಹಳದೀ ಬಣ್ಣದ ಕಾರಕನು. ಆದುದರಿಂದ ಗುರುಗ್ರಹವೇ ಈ ರೋಗದ ಕಾರಕನು. ಗುರು ದೂಷಿತನಿರದೆ ಯಾರಿಗೂ ಈ ರೋಗ ಬರಲಾರದು.

**ಕಾರಕಸ್ಥಾನ :—** ಪಂಚಮಸ್ಥಾನವು ಯಕೃತ್ತಿನ ಸ್ಥಾನವಿರುವದರಿಂದ ಪಂಚಮಸ್ಥಾನವೇ ಈ ರೋಗದ ಕಾರಕಸ್ಥಾನವು. ಆದುದರಿಂದ ಪಂಚಮಸ್ಥಾನ ಮತ್ತು ಪಂಚಮೇಶ ದೂಷಿತರಿರುವ ಜಾತಕರು ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ಕಾರಕಲಗ್ನ :—** ಸಿಂಹರಾಶಿಯ ಪ್ರಭಾವವು ಯಕೃತ್ತಿನ ಮೇಲಿರುತ್ತದೆ. ಸಿಂಹರಾಶಿಯು ದೂಷಿತವಿರದೆ ಯಾರಿಗೂ ಕಾಮಣಿ ಬರಲಾರದು. ಆದುದರಿಂದ ಮೇಷ, ವೃಷಭ, ಕನ್ಯಾ, ಮಕರ, ಮೀನ ಈ ಲಗ್ನದವರು ತದನಂತರ ಮಿಥುನ, ಕರ್ಕ, ವೃಶ್ಚಿಕ—ಈ ಲಗ್ನದವರೇ ಹೆಚ್ಚಾಗಿ ಈ— ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರು ಎಂದು ಹೇಳಲು ಬಾರದು. ಆದರೆ ಯಕೃತ್ತದ ಮೇಲೆ ಸಿಂಹರಾಶಿಯ ಪ್ರಭಾವವೂ, ರಕ್ತದ ಮೇಲೆ ಕುಂಭರಾಶಿಯ ಪ್ರಭಾವವೂ ಇರುವದರಿಂದ ಈ ಎರಡು ರಾಶಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಆ ಜಾತಕನಿಗೆ ಈ ರೋಗದ ಭೀತಿ ಬಹಳ.

ಬಹಳ ದಿವಸ ಮಲೇರಿಯಾದಿಂದ ಬಳಲಿದ ರೋಗಿಗೂ ಕಾಮಣಿ ಉಂಟಾಗುವ ಸಂಭವವಿರುವದರಿಂದ ಮಲೇರಿಯಾದಲ್ಲಿಯ ಯೋಗಗಳನ್ನೂ ಪರಿಶೀಲಿಸಬೇಕು.

## ೨೯. ಮಧುಮೇಹ ( Diabetes )

ಇದೊಂದು ಶ್ರೀಮಂತರ ಬೇನೆ. ಕುಳಿತಲ್ಲಿಯೇ ಕುಳಿತು (ವ್ಯಾಯಾಮ ಮಾಡದೆ) ಪೌಷ್ಟಿಕ, ಪಿಷ್ಟಮಯ ಸುಗ್ರಾಸ ತಿನ್ನುಣ್ಣುವ ಸುಖಭೋಗಿಗಳ ಸುಖಿವರ್ಗದವರ ರೋಗವಿರುತ್ತದೆ. ಇದಲ್ಲದೆ ಮಾನಸಿಕ ಶ್ರಮವಹಿಸುವ ನ್ಯಾಯಾಧೀಶ, ವಕೀಲ, ಡಾಕ್ಟರ್, ಪ್ರೊಫೆಸರ್, ರಾಜಕಾರಣಿ, ಜ್ಯೋತಿಷಿ ಮೊದಲಾದ ಬುದ್ಧಿಜೀವಿಗಳಿಗೂ ಇದರ ಉಪದ್ರವ ಬಹಳ. ಈ ರೋಗ ಸಾಮಾನ್ಯವಾಗಿ ನಾಲ್ವತ್ತು ವಯಸ್ಸಿನ ಮೇಲಿನವರಿಗೆ ತಗಲುವ ಸಂಭವವಿದೆ. ಇಷ್ಟೊಂದು ಹಿನ್ನೆಲೆಯಲ್ಲಿ ಈ ರೋಗದ ವಿಷಯವಾಗಿ ಜ್ಯೋತಿಷ್ಯದ ಭಾಷ್ಯ ಏನೆಂಬುದನ್ನು ನೋಡುವಾ.

**ಕಾರಕಗ್ರಹ :—** ಈ ರೋಗದ ಕಾರಕಗ್ರಹ ಯಾವದು ಎಂಬು ವದೇ ಕಷ್ಟಕರ. ಏಕೆಂದರೆ ವಾತ, ಪಿತ್ತ, ಕಫ ಈ ಮೂರೂ ದೋಷಗಳು ಕುಪಿತವಿರುವವಲ್ಲದೆ, ಮೇದ, ರಕ್ತ, ವೀರ್ಯ, ಮಾಂಸ, ಜಲ, ಸ್ನೇಹ, ಲಸಿಕಾ, ಮಜ್ಜಾ, ರಸ ಈ ಎಲ್ಲವೂ ದೂಷಿತವಿರುತ್ತವೆ. ಆದ್ದರಿಂದ ಕಾರಕ ಗ್ರಹ ಯಾವದು ಎಂಬುದು ಸಮಸ್ಯೆಯೇ!

ಈ ಎಲ್ಲ ಸಂಗತಿಗಳು ದೂಷಿತವಿದ್ದರೂ ಕಫದೋಷಪ್ರಧಾನವಿರುತ್ತದೆ. ಇದಲ್ಲದೆ ಈ ರೋಗದ ಮುಖ್ಯ ಲಕ್ಷಣವೆಂದರೆ, ಶರೀರದ ರಕ್ತದಲ್ಲಿಯ ಸಕ್ಕರೆಯ ಪ್ರಮಾಣ ಹೆಚ್ಚಾಗುವಿಕೆ ಹಾಗೂ ಮೂತ್ರದೊಂದಿಗೆ ಹೋಗುವಿಕೆ, ಮೂತ್ರವಿಸರ್ಜನೆಯು ಅನೇಕ ಬಾರಿ ಹಾಗೂ ಬಹಳ ಪ್ರಮಾಣದಿಂದ ಆಗು ವಿಕೆ, ಅದೂ ಸಹ ರಾತ್ರಿಯಲ್ಲಿಯೇ ಹೆಚ್ಚಾಗುವಿಕೆ, ನೀರಡಿಕೆ ಬಹಳವಾಗು ವಿಕೆ. ಈ ಎಲ್ಲ ಲಕ್ಷಣ ಹಾಗೂ ಭಾವನೆಗಳ ಮೂಲಕ ಗುರು, ಚಂದ್ರ, ಶುಕ್ರರೇ ಈ ರೋಗದ ಕಾರಕರು. ಏಕೆಂದರೆ ಶರೀರದಲ್ಲಿ ಸಕ್ಕರೆಯ ಪ್ರಮಾಣವನ್ನು ಹೆಚ್ಚಿಸುವ ಕಾರ್ಯ ಹಾಗೂ ಯಕೃತ್ತಿನಲ್ಲಿ (ರಕ್ತದಲ್ಲಿ) ದೋಷವನ್ನುಂಟುಮಾಡುವ ಕಾರ್ಯ, ಗುರುಗ್ರಹದ ಗುಣಧರ್ಮವಿರುತ್ತದೆ. ಇದರಂತೆಯೇ ಶರೀರದಲ್ಲಿ ಜಲಾಂಶವನ್ನು ವರ್ಧಿಸುವ ಕಾರ್ಯ ಹಾಗೂ ಮೂತ್ರಪ್ರವೃತ್ತಿ ಮೇಲಿಂದ ಮೇಲೆ ಆಗುವ ಕಾರ್ಯ ಚಂದ್ರಗ್ರಹದ ಗುಣ ಧರ್ಮವು, ಶುಕ್ರನು ಜನನೇಂದ್ರಿಯ ಹಾಗೂ ಮೂತ್ರವಹ ಸ್ಥಾನದ ಅಧಿಪತಿಯು. ಆದುದರಿಂದ ಗುರು, ಚಂದ್ರ, ಶುಕ್ರರು ದೂಷಿತರಿರದೆ ಯಾರಿಗೂ ಈ ರೋಗ ಬರಲಾರದು.

**ಕಾರಕಲಗ್ನ :—** ಮೂತ್ರವಿಸರ್ಜನಾಕ್ರಿಯೆಯ ವೃಶ್ಚಿಕರಾಶಿಯದು. ಯಾವದೇ ಕಾರಣದಿಂದ ಶರೀರದಲ್ಲಿಯ ರಕ್ತದೂಷಿತವಾಗುವ ಕ್ರಿಯೆಯು ಸಿಂಹ, ಕುಂಭರಾಶಿಯದಿರುತ್ತದೆ. ಆದುದರಿಂದ ಸಿಂಹ, ವೃಶ್ಚಿಕ, ಕುಂಭ ಈ ರಾಶಿಗಳು ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮೇಷ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ಧನು, ಮಕರ, ಮೀನ ಈ ಲಗ್ನದವರೇ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮ, ಅಷ್ಟಮ ಹಾಗೂ ಷಷ್ಠ ಈ ಸ್ಥಾನಗಳನ್ನು ಪರಿಶೀಲಿಸಬೇಕು. ಏಕೆಂದರೆ ಮೂತ್ರದಲ್ಲಿ

ವಿಕೃತಿಯಿರುವದರಿಂದ ಅಷ್ಟಮಸ್ಥಾನವೂ, ರಕ್ತದಲ್ಲಿ ಸಕ್ಕರೆಯ ಪ್ರಮಾಣ ಹೆಚ್ಚಾಗುವಿಕೆಯ ಕ್ರಿಯೆಯು ಪಂಚಮಸ್ಥಾನದಿಂದಲೂ, ಅಗ್ನಿಮಾಂದ್ಯ ಹಾಗೂ ಸ್ವಾದುಪಿಂಡದಲ್ಲಿ ದೋಷವಿರುವದರಿಂದ ಷಷ್ಠಸ್ಥಾನವೂ ಈ ರೋಗದ ಕಾರಕಸ್ಥಾನಗಳಿರುತ್ತವೆ.

**ರಾಶಿ :-** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟರಾಶಿಯ ವರೇ ಈ ರೋಗದಿಂದ ಬಳಲುತ್ತಿರುವರೆಂದು ಹೇಳುವದು ಕಠಿಣವಿದ್ದರೂ ಯಾವಾಗಲೂ ನಿದ್ದೆಯಲ್ಲಿಯೇ ಸುಖಕಾಣುವ ಆಲಸಿಗಳಿಗೆ ಈ ರೋಗ ಹೆಚ್ಚಾಗಿ ತಗಲುವದರಿಂದ ಹೆಚ್ಚು ನಿದ್ರೆ ಮಾಡುವ ರಾಶಿಯವರಾದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ರಾಶಿಯವರಿಗೂ ವಕೀಲ, ಪ್ರೊಫೆಸರ್, ಲೇಖಕ, ಪತ್ರಿಕಾಕರ್ತ ಮೊದಲಾದ ಬುದ್ಧಿಜೀವಿಗಳ ರಾಶಿಯವರಾದ ಮಿಥುನ, ತುಲಾ, ಕುಂಭ ಈ ರಾಶಿಯವರಿಗೂ ಈ ರೋಗ ತಗಲುವ ಸಂಭವವಿದೆ.

**ಯೋಗಗಳು :**

೧) ಮಾನಸಿಕ ಆಘಾತದಿಂದಲೂ ಈ ರೋಗ ತಗಲಬಹುದಾದ್ದರಿಂದ ಚಂದ್ರನು ದೂಷಿತನಾಗಿ ಯಾರ ಜಾತಕದಲ್ಲಿರುವನೋ ಅಂಥವರಿಗೆ,

೨) ಕುಂಭ ಲಗ್ನವಿದ್ದು, ಲಗ್ನದಲ್ಲಿ ಗುರು, ಶುಕ್ರರಿದ್ದರೆ,

೩) ಕುಂಭರಾಶಿಯಲ್ಲಿ ರವಿ, ಶುಕ್ರ, ಚಂದ್ರ, ಮಂಗಳರಿದ್ದು ಲಗ್ನ, ಪಂಚಮ, ಷಷ್ಠ, ಅಷ್ಟಮದಲ್ಲಿದ್ದರೆ,

೪) ರವಿ, ಚಂದ್ರ, ತುಲಾ ರಾಶಿಯಲ್ಲಿದ್ದು ಮಂಗಳನು ವೃಶ್ಚಿಕ ರಾಶಿಯವನಾಗಿ ಅಷ್ಟಮ, ಲಗ್ನ, ಷಷ್ಠ, ದ್ವಾದಶ ಈ ಸ್ಥಾನದಲ್ಲಿದ್ದರೆ,

೫) ತುಲಾರಾಶಿಯ ಗುರುವು ಲಗ್ನ, ಷಷ್ಠ, ಅಷ್ಟಮ ಈ ಸ್ಥಾನದಲ್ಲಿದ್ದು, ಶುಕ್ರ ಇಲ್ಲವೆ ಮಂಗಳ ಇಲ್ಲವೆ ಶನಿಯೊಂದಿಗೆ ಪ್ರತಿಯೋಗ ಮಾಡುತ್ತಿದ್ದರೆ,

೬) ಸಿಂಹ, ಕುಂಭ, ವೃಶ್ಚಿಕ ಈ ರಾಶಿಗಳಲ್ಲಿ ಅನೇಕ ಗ್ರಹಗಳಿದ್ದರೆ (ಈ ರಾಶಿಗಳು ದೂಷಿತವಿದ್ದರೆ),

ಮೇಲೆ ಕಂಡ ಈ ಆರು ಯೋಗದಲ್ಲಿ ಜನಿಸಿದವರಿಗೆ ಮಧುಮೇಹದ ಭೀತಿಯಿರುತ್ತದೆ.

## ೩೦. ಪ್ರಮೇಹ

• "ಪ್ರಕರ್ಷೇನ ಮೇಹನಂ ಇತಿ ಪ್ರಮೇಹ" ಅಂದರೆ ಹೆಚ್ಚು ಪ್ರಮಾಣದಲ್ಲಿ ಮೂತ್ರ ಹೋಗುವದು ಹಾಗೂ ಹೆಚ್ಚು ಸಲ (ಸಂಖ್ಯೆ) ಮೂತ್ರವಿಸರ್ಜನೆಯಾಗುವಿಕೆ ಇದೇ ಈ ರೋಗದ ಮೂಲ ಮತ್ತು ಮುಖ್ಯ ಲಕ್ಷಣ.

**ಸ್ಥಾನ :—** ಈ ರೋಗದಲ್ಲಿ ಯಕೃತ್ ಮತ್ತು ಮೂತ್ರ ಪಿಂಡಗಳು ದೂಷಿತವಿರುತ್ತವೆ. ಆದುದರಿಂದ ಪಂಚಮ, ಸಪ್ತಮ, ಅಷ್ಟಮ ಸ್ಥಾನಗಳೇ ಈ ರೋಗದ ಕಾರಕಸ್ಥಾನಗಳು. ಆದ್ದರಿಂದ ಈ ಸ್ಥಾನಾಧೀಶರು, ಈ ಸ್ಥಾನಗಳು ದೂಷಿತರಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ಕಾರಕಗ್ರಹ :—** ಈ ರೋಗದ ಕಾರಕಗ್ರಹಗಳು ಗುರು-ಚಂದ್ರರು. ಏಕೆಂದರೆ ಕಫದೋಷಪ್ರಧಾನವಿರುವದರಿಂದ, ಮೇಲಿಂದ ಮೇಲೆ ಮೂತ್ರ ವಿಸರ್ಜನೆಯಾಗುವದರಿಂದ ಚಂದ್ರನೂ, ಯಕೃತ್‌ದಲ್ಲಿ ದೋಷವಿರುವದರಿಂದ ಗುರುವೂ ಈ ರೋಗದ ಕಾರಕರು.

**ಕಾರಕಲಗ್ನ:—** ಮೂತ್ರವಿಸರ್ಜನಾಕ್ರಿಯೆಯಲ್ಲಿ ದೋಷವಿರುವದರಿಂದ ವೃಶ್ಚಿಕ ರಾಶಿಯೂ, ಬಸ್ತಿಯಲ್ಲಿ ದೋಷವಿರುವದರಿಂದ ತುಲಾ ರಾಶಿಯೂ, ಯಕೃತ್ತಿನಲ್ಲಿ ದೋಷವಿರುವದರಿಂದ ಸಿಂಹರಾಶಿಯೂ ದೂಷಿತವಿರುತ್ತವೆ. ಆದುದರಿಂದ ಮೇಷ, ವೃಷಭ, ತುಲಾ, ಕನ್ಯಾ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಕಫ ಪ್ರಕೃತಿಯ ರಾಶಿಯವರಾದ ಕರ್ಕ, ವೃಶ್ಚಿಕ, ಮೀನ ರಾಶಿಯವರಿಗೂ ತುಲಾ, ವೃಷಭ ರಾಶಿಯವರಿಗೂ ಈ ರೋಗದ ಭೀತಿ ಬಹಳ.

## ೩೧. ಉಪದಂಶ (Syphilis)
## ಮೃದೂಷ್ಣದಂಶ (Soft-Sore)
## ಪರಮಾ (Gonorrhœa)

ಘಟಿಂಗ ಸ್ತ್ರೀ-ಪುರುಷರ ಸಂಸರ್ಗದಿಂದಾಗುವ ಭಯಂಕರ ಹಾಗೂ ಸಾಂಸರ್ಗಿಕವಾದ ಈ ರೋಗಗಳ ಪರಿಣಾಮವನ್ನು ಮುಂದಿನ ಪೀಳಿಗೆಯ

ವರೂ ಅರ್ಥಾತ್ ತಲೆಮಾರಿನಲ್ಲೂ ಭೋಗಿಸಬೇಕಾಗುತ್ತದೆ. ಇಂಥ ರೋಗಗಳ ವಿಷಯವಾಗಿ ಜ್ಯೋತಿಷ್ಯದ ವ್ಯಾಖ್ಯೆಯೇನು ? ಈ ರೋಗಗಳ ಕಾರಕ ಗ್ರಹ, ಲಗ್ನ, ರಾಶಿ, ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ. ಜ್ಯೋತಿಷ್ಯದ ದೃಷ್ಟಿಯಿಂದ ಈ ಮೂರೂ ರೋಗಗಳ ಕಾರಕ, ಲಗ್ನ, ಸ್ಥಾನ, ಗ್ರಹಗಳಲ್ಲಿ ವಿಶೇಷ ಭೇದವಿರುವದಿಲ್ಲವಾದ್ದರಿಂದ ಒಂದರಲ್ಲಿಯೇ (ಒಟ್ಟಿನಲ್ಲಿ) ಬರೆಯಲಾಗಿದೆ,

**ಕಾರಕಗ್ರಹ:**— ಈ ರೋಗಗಳ ಕಾರಕಗ್ರಹಗಳೆಂದರೆ ಶುಕ್ರ-ಚಂದ್ರರು. ಏಕೆಂದರೆ ಇದೊಂದು ಶುಕ್ರಜನ್ಯರೋಗವಿರುತ್ತದೆ. ವಿಷಯವಾಸನಾ, ಇಂದ್ರಿಯಜನ್ಯ ಸುಖ, ವಿಷಯವಾಸನೆಯ ಅತಿರೇಕ, ಅನೈಸರ್ಗಿಕ ವಿಷಯವಾಸನೆ, ಅಮಾರ್ಯಾದಿತ ವಾಸನಾಲೋಲುಪತೆ, ಲೈಂಗಿಕ ಅನಾಚಾರ ಹಾಗೂ ಅತ್ಯಾಚಾರ, ವ್ಯಭಿಚಾರ ಮೊದಲಾದ ವಿಷಯವಾಸನೆಯ ಗುಣಧರ್ಮವು ಶುಕ್ರಗ್ರಹದಲ್ಲಿರುತ್ತದೆ. ಇದಲ್ಲದೆ ಮೇಢ್ರ, ಯೋನಿಗಳ ಮೇಲೆ ಶುಕ್ರನ ಆಧಿಪತ್ಯವಿರುತ್ತದೆ. ಶುಕ್ರನು ದೂಷಿತನಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು. ಆದುದರಿಂದ ಶುಕ್ರನೇ ಈ ರೋಗದ ಕಾರಕನು.

ಶುಕ್ರನ ತರುವಾಯ ಚಂದ್ರನೂ ಈ ರೋಗದ ಕಾರಕನು. ಏಕೆಂದರೆ ಚಂದ್ರನು ಮನಸ್ಸಿನ ಕಾರಕನು. ಮನಸ್ಸು ದೂಷಿತವಾಗದೆ, ಕಲುಷಿತವಾಗದೆ, ದುರ್ವಿಕಾರಕ್ಕೊಳಗಾಗದೆ ಯಾರೂ ಇಂಥ ಕಾರ್ಯಗಳಿಗೆ ತೊಡಗುವದಿಲ್ಲ. ಆದುದರಿಂದ ಚಂದ್ರನೂ ಈ ರೋಗದ ಕಾರಕನು.

**ಸ್ಥಾನ:** — ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಅಷ್ಟಮಸ್ಥಾನವೇ ಈ ರೋಗದ ಕಾರಕಸ್ಥಾನವು. ಏಕೆಂದರೆ ಅಷ್ಟಮಸ್ಥಾನವಿದು ಯೋನಿ, ಮೇಢ್ರ (ಲಿಂಗ)ಗಳ ಸ್ಥಾನವಿರುತ್ತದೆ. ಅಷ್ಟಮಸ್ಥಾನ ಹಾಗೂ ಅಷ್ಟಮೇಶ ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

ಅಷ್ಟಮಸ್ಥಾನದ ನಂತರ ಪಂಚಮಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಪಂಚಮಸ್ಥಾನವಿದು ಐಹಿತ ಸೌಖ್ಯ ಅರ್ಥಾತ್ ಇಂದ್ರಿಯಜನ್ಯ

ಸೌಖ್ಯದ ಕಾರಕವು. ಆದುದರಿಂದ ಪಂಚಮಸ್ಥಾನ, ಪಂಚಮೇಶರನ್ನು ಪರಿಶೀಲಿಸಬೇಕು.

ಪಂಚಮಸ್ಥಾನದ ನಂತರ ಲಗ್ನ-ಸಪ್ತಮವನ್ನೂ ಪರಿಶೀಲಿಸಬೇಕು. ಏಕೆಂದರೆ ತನುಸ್ಥಾನವಿದು ಜಾತಕನ ಸ್ವಭಾವ, ಶೀಲ, ಗುಣ, ಧರ್ಮವನ್ನು ದರ್ಶಿಸುತ್ತದೆ. ಸಪ್ತಮಸ್ಥಾನವಿದು, ಜಾತಕನ ವೈವಾಹಿಕ ಜೀವನದ ಸುಖ-ದುಃಖಗಳನ್ನು ತೋರಿಸುತ್ತದೆ.

ಲಗ್ನ:— ನಿರ್ದಿಷ್ಟವಾದ ಲಗ್ನದವರೇ ಈ ರೋಗದಿಂದ ಬಳಲುವರೆಂದು ಹೇಳಲು ಬಾರದು. ಜಲರಾಶಿಗಳು ವಿಷಯವಾಸನೆಯ ಅತಿಶಯವನ್ನು ತೋರಿಸುತ್ತವೆ. ಅದರಲ್ಲಿಯೂ ವೃಶ್ಚಿಕರಾಶಿಯು ವಿಷಯವಾಸನೆಯ ಅತಿರೇಕವನ್ನು ತೋರಿಸುತ್ತದೆ. ಆದುದರಿಂದ ಕರ್ಕ, ವೃಶ್ಚಿಕ, ಮೀನ ಈ ರಾಶಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಆ ಲಗ್ನದವರೇ ಈ ರೋಗಗಳಿಂದ ಬಳಲುವರು. ಆದ್ದರಿಂದ ಮೇಷ, ವೃಷಭ, ಕರ್ಕ, ಮಿಥುನ, ಸಿಂಹ, ವೃಶ್ಚಿಕ, ಮೀನ, ಧನು ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬರುತ್ತದೆ.

**ರಾಶಿ:** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ವೃಶ್ಚಿಕ, ಮೀನ ಈ ರಾಶಿಯವರೇ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ಯೋಗಗಳು**

೧) ಶುಕ್ರ-ಮಂಗಳ, ಶುಕ್ರ-ಚಂದ್ರ, ಶನಿ-ಚಂದ್ರ, ಶನಿ-ಶುಕ್ರ, ಚಂದ್ರ-ಮಂಗಳ ಈ ಗ್ರಹಗಳ ಯುತಿಯೋಗವು ಪಂಚಮ, ಅಷ್ಟಮ, ಸಪ್ತಮ, ದ್ವಾದಶ, ಲಗ್ನ ಈ ಸ್ಥಾನಗಳಲ್ಲಿದ್ದರೆ,

೨) ಜಲರಾಶಿಯ ಇಲ್ಲವೆ ವಾಯುರಾಶಿಯ ಚಂದ್ರನು ಲಗ್ನ, ಪಂಚಮ, ಸಪ್ತಮ, ಅಷ್ಟಮ, ದ್ವಾದಶ ಈ ಯಾವದೊಂದು ಸ್ಥಾನದಲ್ಲಿ ಶನಿ, ಮಂಗಳ, ಶುಕ್ರ ಈ ಯಾವದೊಂದು ಗ್ರಹಗಳಿಂದ ದೃಷ್ಟಿಸಲ್ಪಟ್ಟವನಿದ್ದರೆ,

೩) ಜಲರಾಶಿಯ ಇಲ್ಲವೆ ವಾಯುರಾಶಿಯ ಇಲ್ಲವೆ ಭೂರಾಶಿಯ

ಶುಕ್ರನು ಪಂಚಮ, ಅಷ್ಟಮ, ಸಪ್ತಮ, ದ್ವಾದಶ ಈ ಯಾವದೊಂದು ಸ್ಥಾನದಲ್ಲಿದ್ದು, ಶನಿ ಇಲ್ಲವೆ, ಮಂಗಳರಿಂದ ನೋಡಲ್ಪಟ್ಟಿದ್ದರೆ,

೪) ಶುಕ್ರ–ಮಂಗಳ, ಚಂದ್ರ–ಮಂಗಳ, ಶುಕ್ರ–ಶನಿ, ಶನಿ–ಚಂದ್ರ, ಇವರ ಪ್ರತಿಯೋಗವು ದ್ವಿತೀಯ, ಅಷ್ಟಮ,ಲಗ್ನ–ಸಪ್ತಮ,ಲಾಭ- ಪಂಚಮ ಈ ಯಾವದೊಂದು ಸ್ಥಾನದಲ್ಲಿದ್ದರೆ,

೫) ಮೇಷ–ಲಗ್ನದ ಲಗ್ನದಲ್ಲಿ ಮಂಗಳನೂ, ಸಪ್ತಮ ಇಲ್ಲವೆ ಅಷ್ಟಮದಲ್ಲಿ ಚಂದ್ರ ಇಲ್ಲವೆ ಶುಕ್ರರು ಅಥವಾ ಯಾವುದೇ ಲಗ್ನದ ಲಗ್ನದಲ್ಲಿ ಮಂಗಳ, ಸಪ್ತಮ ಇಲ್ಲವೆ ಅಷ್ಟಮದಲ್ಲಿ ಚಂದ್ರ ಇಲ್ಲವೆ ಶುಕ್ರರು ಇದ್ದರೆ,

೬) ಮೇಷ ಇಲ್ಲವೆ ವೃಶ್ಚಿಕ ರಾಶಿಗಳು ಪಂಚಮ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದು, ಆ ಸ್ಥಾನಗಳಲ್ಲಿ ಚಂದ್ರ ಇಲ್ಲವೆ ಶುಕ್ರರಿದ್ದು, ಶನಿ ಇಲ್ಲವೆ ಮಂಗಳರಿಂದ ನೋಡಲ್ಪಟ್ಟದ್ದರೆ "Hydrosil Disease" ಉಂಟಾಗುತ್ತದೆ.

೭) ಜಲರಾಶಿಗಳು ಸಾಂಸರ್ಗಿಕ ರೋಗಗಳನ್ನು (ಸಂಸರ್ಗಜನ್ಯ) ಹಬ್ಬಿಸಲು ಸಹಾಯಕವಾಗುತ್ತವೆ.

೮) ಶನಿಯು ಷಷ್ಠದಲ್ಲಿಯೂ ಅಷ್ಟಮದಲ್ಲಿ ಶುಕ್ರ, ವ್ಯಯದಲ್ಲಿ ಚಂದ್ರ ಅಥವಾ ಶನಿಯು ಷಷ್ಠದಲ್ಲಿ, ಅಷ್ಟಮದಲ್ಲಿ ಚಂದ್ರ, ವ್ಯಯದಲ್ಲಿ ಶುಕ್ರ ಇದ್ದರೆ,

೯) ಕರ್ಕರಾಶಿಯು ಹಾಗೂ ಮೀನರಾಶಿಯು ಮಾನಸಿಕ ದೌರ್ಬಲ್ಯವನ್ನು ತೋರಿಸುತ್ತವೆ. ವೃಶ್ಚಿಕರಾಶಿಯು ವಿಷಯವಾಸನೆಯ ಅತಿರೇಕವನ್ನು ತೋರಿಸುತ್ತದೆ. ಈ ರಾಶಿಗಳು ದೂಷಿಕವಾಗಿ ಲಗ್ನ, ಪಂಚಮ, ಸಪ್ತಮ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿದ್ದು ಚಂದ್ರ ಇಲ್ಲವೆ ಶುಕ್ರರಲ್ಲಿದ್ದರೆ, ೧೦) ಶನಿಯು ಲಾಭದಲ್ಲಿದ್ದು, ಚಂದ್ರ ಶುಕ್ರರು, ಲಗ್ನ, ಪಂಚಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ, ೧೧) ಮಂಗಳನು ಪಂಚಮದಲ್ಲಿದ್ದು, ಚಂದ್ರ, ಶುಕ್ರರು ಅಷ್ಟಮ ಇಲ್ಲವೆ ವ್ಯಯದಲ್ಲಿ ಇದ್ದರೆ,

ಹೀಗೆ ಮೇಲೆ ಬರೆದಹನ್ನೊಂದು ಯೋಗಗಳಲ್ಲಿ ಜನಿಸಿದವರಿಗೆ ಉಪದಂಶ, ಮೃದುಪದಂಶ, ಪರಮಾ ಈ ರೋಗಗಳು ಬರುತ್ತವೆ.

## ೩೨. ಅರ್ಶ (ಮೂಲವ್ಯಾಧಿ) ( Piles )
## ಭಗಂದರ, (ಝುರಡಿ ಹುಣ್ಣು), ಪಿಶಾರ

ಯಾವ ವ್ಯಾಧಿಯಲ್ಲಿ ಮಾಂಸದ ಕೀಲಗಳು ಗುದಮಾರ್ಗದ ಅವರೋಧನ ಉಂಟುಮಾಡಿ (ಪ್ರತಿಬಂಧಿಸಿ) ಶತ್ರುಗಳು ಮನುಷ್ಯರನ್ನು ಪೀಡಿಸುವಂತೆ ಪೀಡಿಸುವವೋ ಅದಕ್ಕೆ 'ಅರ್ಶ' ಎನ್ನುವರು. ಸಾಮಾನ್ಯ ಭಾಷೆಯಲ್ಲಿ "ಮೂಲವ್ಯಾಧಿ" ಎನ್ನುವರು.

ಅಗ್ನಿಮಾಂದ್ಯದಿಂದಾಗಲಿ ಇಲ್ಲವೆ ಮಲಬದ್ಧತೆಯಿಂದಾಗಲೀ ಮಲವು ಸಂಚಿತವಾಗುವದರಿಂದಲೂ, ಅತಿಮೈಥುನದಿಂದಲೂ, ಸೈಕಲ್, ಟ್ರಕ್, ಮೋಟರ್, ಕುದುರೆ, ಪಟಪಟಿ ಮೊದಲಾದ ವಾಹನಗಳ ಮೇಲಿಂದ ಸತತ ಸಂಚಾರದಿಂದಲೂ ಬಿರುಸು ಸ್ಥಳದಲ್ಲಿ ಯಾವಾಗಲೂ ಕುಳಿತುಕೊಳ್ಳುವದ ರಿಂದಲೂ ಒಂದೇಸವನೆ ತಿಣುಕುವದರಿಂದಲೂ, ಅರ್ಶ ಉಂಟಾಗುತ್ತದೆಂದು ಆಯುರ್ವೇದ ಶಾಸ್ತ್ರಜ್ಞರ ಅಭಿಪ್ರಾಯ. ಇನ್ನು ಈ ರೋಗದ ವಿಷಯ ವಾಗಿ ಜ್ಯೋತಿಷ್ಯರೀತ್ಯಾ ಕಾರಕಗ್ರಹ, ಸ್ಥಾನ, ರಾಶಿ, ಲಗ್ನಾದಿಗಳಾವವೆಂಬು ದನ್ನು ಪರಿಶೀಲಿಸುವಾ.

**ಕಾರಕಗ್ರಹ :—** ಅಗ್ನಿಮಾಂದ್ಯದೋಷದಿಂದ ತ್ವಚೆ, ಮಾಂಸ, ಮೇದಸ್ಸುಗಳೇ ಹೆಚ್ಚು ದೂಷಿತವಿರುವವಲ್ಲದೆ ಗುದದಲ್ಲಿ ಮಾಂಸದ ಅಂಕುರ ಗಳು ನಿರ್ಮಾಣವಾಗುವದೇ ಪ್ರಧಾನ ಲಕ್ಷಣವಿರುವದರಿಂದ ಕಫವೇ ಪ್ರಧಾನ ದೂಷಿತವಿರುತ್ತದೆ. ಆದುದರಿಂದ ಗುರು-ಚಂದ್ರರೇ ಕಾರಕಗ್ರಹಗಳು.

ಗುರು-ಚಂದ್ರರ ತರುವಾಯ ಶನಿಯೂ ಈ ರೋಗದ ಕಾರಕನು. ಏಕೆಂದರೆ ಗುದಸ್ಥಾನವಿದು ವಾತದ ಸ್ಥಾನವಿರುತ್ತದೆ. ಇದಲ್ಲದೆ ಮಲಪ್ರವೃತ್ತಿ ಯಲ್ಲಿ ತೊಂದರೆಯಾಗುವಿಕೆ; ಗುದವಲಯಗಳು ನಿರ್ಮಾಣವಾಗುವಿಕೆ. ಗುದಕ್ಕೆ ಪೀಡೆಯಾಗಿ ಸರಿಯಾಗಿ ಕುಳಿತುಕೊಳ್ಳದ ಹಾಗೆ ಮಾಡುವಿಕೆ ಈ ಎಲ್ಲ ಗುಣಧರ್ಮಗಳು ಶನಿಗ್ರಹದಲ್ಲಿರುವದರಿಂದ ಶನಿಯೂ ಈ ರೋಗದ ಕಾರಕನು.

ರಕ್ತಾರ್ಶಕ್ಕೆ ರವಿ, ಮಂಗಳ, ಶನಿಯರು ಕಾರಕರು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ರೋಗವು ಗುಹ್ಯದ ಮೇಲೆ ಆಗುವದರಿಂದ ಗುಹ್ಯಸ್ಥಾನವಾದ ಅಷ್ಟಮಸ್ಥಾನವೇ ಈ ರೋಗದ ಕಾರಕಸ್ಥಾನವಾಗಿರುತ್ತದೆ. ಆದುದರಿಂದ ಅಷ್ಟಮಸ್ಥಾನ, ಅಷ್ಟ-ಮೇಶ ಇವರು ದೂಷಿತರಿರದೆ ಯಾರಿಗೂ ಈ ರೋಗವುಂಟಾಗಲಾರದು.

ಅಷ್ಟಮಸ್ಥಾನದ ನಂತರ ಷಷ್ಠಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಅಗ್ನಿಮಾಂದ್ಯ, ಮಲಬದ್ಧತೆಗಳೇ ಈ ರೋಗ ಉದ್ಭವಕ್ಕೆ ಕಾರಣವಿರುವಹ ರಿಂದ ಕೋಷ್ಠಾಗ್ನಿಯ ಸ್ಥಾನವೂ, ಕರುಳಿನ ಸ್ಥಾನವೂ ಆದ ಷಷ್ಠಸ್ಥಾನವೂ ಕಾರಕವಿರುತ್ತದೆ. ಆದುದರಿಂದ ಷಷ್ಠಸ್ಥಾನ, ಷಷ್ಠೇಶ ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

ಲಗ್ನ :— ವೃಶ್ಚಿಕರಾಶಿಯ ಆಧಿಪತ್ಯವು ಗುದದ ಮೇಲಿರುತ್ತದೆ. ವೃಶ್ಚಿಕರಾಶಿಯು ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು. ಆದುದರಿಂದ ಮೇಷ, ಮಿಥುನ, ವೃಶ್ಚಿಕ, ಧನು ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ. ರಕ್ತಪಿತ್ತದವರಿಗೆ ಈ ಲಗ್ನಗಳ ಹೊರತಾಗಿ ಕನ್ಯಾ, ಮೀನ, ಮಕರ ಈ ಲಗ್ನಗಳನ್ನೂ ಪರಿಶೀಲಿಸಬೇಕು.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ರಾಶಿಯ ಜನರಿಗೆ ಅಂಕುರದ ಮೂಲವ್ಯಾಧಿಯು ಬರುತ್ತದೆ.

ಮೇಷ, ಸಿಂಹ, ಧನು, ಮಕರ, ವೃಶ್ಚಿಕ ಈ ರಾಶಿಯವರಿಗೆ ರಕ್ತಾರ್ಶದ ಭೀತಿ ಬಹಳ.

**ಯೋಗಗಳು :—**

೧) ಜಲರಾಶಿಯಲ್ಲಿ ರವಿಯಿದ್ದು, ಶನಿಯಿಂದ ನೋಡಲ್ಪಡುತ್ತಿದ್ದರೆ,

೨) ಶುಕ್ರ-ಚಂದ್ರರು ಲಗ್ನ, ಷಷ್ಠ, ಅಷ್ಟಮ, ದ್ವಾದಶದಲ್ಲಿದ್ದು ಶನಿಯಿಂದ ನೋಡಲ್ಪಡುತ್ತಿದ್ದರೆ,

೩) ಚಂದ್ರನು ಅಷ್ಟಮ, ಷಷ್ಠದಲ್ಲಿದ್ದು ( ಯಾವದೇ ರಾಶಿಯ ) ಕರ್ಕ, ವೃಶ್ಚಿಕ ಅಂಶದವನಿದ್ದರೆ,

೪) ಕ್ಷೀಣ ಚಂದ್ರನು ಅಷ್ಟಮದಲ್ಲಿದ್ದು, ಬಲಾಢ್ಯ ಮಂಗಳನಿಂದ ನೋಡಲ್ಪಡುತ್ತಿದ್ದರೆ, ಭಗಂದರವುಂಟಾಗುತ್ತದೆ.

೫) ಜಲರಾಶಿಯ ಮಂಗಳನು ಅಷ್ಟಮದಲ್ಲಿದ್ದು ಶನಿಯಿಂದ ನೋಡಲ್ಪಡುತ್ತಿದ್ದರೆ, ಭಗಂದರ ಇಲ್ಲವೆ ಪಿಶಾರ (Pishar) ಉಂಟಾಗುತ್ತವೆ.

೬) ವೃಷಭ ಇಲ್ಲವೆ ವೃಶ್ಚಿಕ ರಾಶಿಯ ಶನಿಯು ಷಷ್ಠದಲ್ಲಿದ್ದು ಅಷ್ಟಮದಲ್ಲಿ ಚಂದ್ರ, ಮಂಗಳ, ಗುರು, ಶುಕ್ರರಿದ್ದರೆ,

೭) ವೃಷಭ, ವೃಶ್ಚಿಕ ರಾಶಿಗಳು ದ್ವಿತೀಯ, ಅಷ್ಟಮದಲ್ಲಿದ್ದು ಗುರು ಶನಿ, ಶನಿ-ಚಂದ್ರ, ಚಂದ್ರ-ಮಂಗಳ, ಮಂಗಳ-ಶನಿ, ಶುಕ್ರ-ಮಂಗಳ, ಶುಕ್ರ-ಶನಿ ಇವರ ಪ್ರತಿಯೋಗವಿದ್ದರೆ,

೮) ಜಲರಾಶಿಯ ಶುಕ್ರನು ಅಷ್ಟಮದಲ್ಲಿದ್ದು, ಶನಿ, ಮಂಗಳ ಇವರಿಂದ ದೃಷ್ಟಿಸಲ್ಪಟ್ಟರೆ,

೯) ಷಷ್ಠ, ಅಷ್ಟಮಸ್ಥಾನಗಳು ಹಾಗೂ ಷಷ್ಠೇಶ, ಅಷ್ಟಮೇಶರು ದೂಷಿತರಿದ್ದರೆ,

೧೦) ವೃಶ್ಚಿಕ ರಾಶಿಯು ಷಷ್ಠ, ಅಷ್ಟಮ, ದ್ವಿತೀಯ, ದ್ವಾದಶ ಈ ಸ್ಥಾನಗಳಲ್ಲಿದ್ದು ಅನೇಕ ಗ್ರಹಯೋಗವಿದ್ದರೆ (ಚತುರ್ಗ್ರಹ, ಪಂಚಗ್ರಹ) ಮೇಲೆ ಬರೆದ ಈ ಹತ್ತು ಯೋಗಗಳಲ್ಲಿ ಜನಿಸಿದ ಜಾತಕನಿಗೆ ಮೂಲವ್ಯಾಧಿಯ ಉಪದ್ರವವಿರುತ್ತದೆ.

## ೩೩. ಜಲೋದರ ( Ascites )

ಉದರರೋಗದಲ್ಲಿ ಅನೇಕ ಪ್ರಕಾರಗಳಿವೆ. ಉದಾಹರಣೆಗೆ ಪ್ಲೀಹೋದರ, ಬದ್ಧೋದರ, ಕ್ಷತೋದರ ಮೊದಲಾದವುಗಳು. ಇವುಗಳಲ್ಲಿ ಜಲೋದರವೂ ಒಂದು ಪ್ರಕಾರವು.

**ಕಾರಕಗ್ರಹ :—** ಜಲ ಅಂದರೆ ನೀರು, ಉದರ ಅಂದರೆ ಹೊಟ್ಟೆ— ಹೊಟ್ಟೆಯಲ್ಲಿ ನೀರು ಸಂಚಿತವಾಗುವದೇ ಈ ರೋಗದ ಲಕ್ಷಣವಿರುತ್ತದೆ. ಚಂದ್ರನ ಆಧಿಪತ್ಯ ಜಲದ ಮೇಲೆಯೂ, ಉದರದ ಮೇಲೆಯೂ ಇರುತ್ತದೆ. ಈ ರೋಗದಲ್ಲಿ ಜಲಾಂಶ ಅಧಿಕವಾಗಿ ಹೊಟ್ಟೆಯು ನಗಾರಿಯಂತೆ ದೊಡ್ಡದಾಗುತ್ತದೆ. ಆದುದರಿಂದ ಚಂದ್ರನೇ ಈ ರೋಗದ ಕಾರಕನು.

ಚಂದ್ರನ ತರುವಾಯ ಗುರುವೂ ಈ ರೋಗದ ಕಾರಕನು. ಏಕೆಂದರೆ ಈ ರೋಗ ಕಫಪ್ರಧಾನ ದೂಷಿತವಿದ್ದು, ಅಗ್ನಿಮಾಂದ್ಯವಿರುತ್ತದೆ. ಇದಲ್ಲದೆ ಜಲೋದರದಲ್ಲಿಯಾಗಲೀ, ಉಳಿದ ಯಾವದೇ ಉದರರೋಗದಲ್ಲಿಯಾಗಲೀ ಯಕೃತ್–ಪ್ಲೀಹಗಳು ದೂಷಿತವಿರುತ್ತವೆ. ಯಕೃತ್–ಪ್ಲೀಹದ ಮೇಲೆ, ಹಾಗೂ ಅಗ್ನಿಮಾಂದ್ಯದ ಮೇಲೆ ಹಾಗೂ ಕಫದೋಷಪ್ರಧಾನ್ಯತೆ ಇವು ಗುರುವಿನ ಗುಣಧರ್ಮಗಳು. ಆದುದರಿಂದ ಗುರುವೂ ಈ ರೋಗದ ಕಾರಕನು. ಗುರು, ಚಂದ್ರರು ದೂಷಿತರಿರದೆ ಯಾರಿಗೂ ಈ ರೋಗ ಉಂಟಾಗಲಾರದು.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಉದರ, ಯಕೃತ್, ಪ್ಲೀಹ ಈ ಅವಯವಗಳ ಸ್ಥಾನವಾದ ಪಂಚಮಸ್ಥಾನವೇ ಈ ರೋಗದ ಕಾರಕಸ್ಥಾನವು. ಆದುದರಿಂದ ಪಂಚಮಸ್ಥಾನ, ಪಂಚಮೇಶ ದೂಷಿತರಿರದೆ ಯಾರಿಗೂ ಈ ರೋಗ ಬರಲಾರದು.

ಪಂಚಮದ ನಂತರ ಷಷ್ಠಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಷಷ್ಠಸ್ಥಾನವಿದು ಕೋಷ್ಠಾಗ್ನಿ ಸ್ಥಾನವಿರುತ್ತದೆ.

ಪಂಚಮ–ಷಷ್ಠಗಳ ನಂತರ ಸಪ್ತಮಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಸಪ್ತಮಸ್ಥಾನವು ಬಸ್ತಿ (Kidney) ಯ ಸ್ಥಾನವಿರುತ್ತದೆ.

ಲಾಭದ ಮೇಲೆ ಅನೇಕ ಗ್ರಹಗಳಿದ್ದರೆ ಉದರವು ದೂಷಿತವಾಗುತ್ತದೆ.

**ಲಗ್ನ :—** ಉದರದ ಮೇಲೆ ಕರ್ಕರಾಶಿಯ ಆಧಿಪತ್ಯವಿರುತ್ತದೆ. ಕರ್ಕರಾಶಿ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮೀನ, ಮೇಷ, ಸಿಂಹ, ಧನು, ಕುಂಭ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವರು. ಈ ಲಗ್ನಗಳ ನಂತರ ವೃಷಭ, ಕನ್ಯಾ, ವೃಶ್ಚಿಕ ಈ ಲಗ್ನದವರಿಗೂ ಕೆಲಮಟ್ಟಿಗೆ ಈ ರೋಗದ ಭೀತಿಯಿರುತ್ತದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಜಲರಾಶಿಯವರಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯವರಿಗೂ, ಭೂರಾಶಿಯವರಿಂದ ವೃಷಭ, ಕನ್ಯಾ, ಮಕರ ಈ ರಾಶಿಯವರಿಗೂ ಈ ರೋಗದ ಭೀತಿ ಬಹಳ ವಿರುತ್ತದೆ.

## ೩೪. ಕ್ಯಾನ್ಸರ್ (Cancer)
## (ಅರ್ಬುದ)

ಕ್ಯಾನ್ಸರಕ್ಕೆ ಆಯುರ್ವೇದದಲ್ಲಿ ಅರ್ಬುದವೆನ್ನುವರು. ಆದರೆ ವಾಡಿಕೆಯಲ್ಲಿ "ಏಡಿ ಹುಣ್ಣು" ಎಂದು ಕರೆಯುವರು. ಇದೊಂದು ಘಾತಕರೋಗವಿದ್ದು, ವಯಸ್ಸು, ಲಿಂಗ, ದೇಶ, ಋತುಮಾನ ಮೊದಲಾದ ಯಾವ ಭೇದಭಾವವಿಲ್ಲದೆ ಎಲ್ಲರನ್ನೂ ಕಾಡುವದಲ್ಲದೆ, ರೋಗ ನಿಧಾನವಾಗುವದೂ ಸಹ ಕಠಿಣವಿರುತ್ತದೆ, ನಿಧಾನವಾದರೂ ಗುಣಮುಖವಾಗುವದು ಕಷ್ಟಸಾಧ್ಯ.

**ಕಾರಕಗ್ರಹ:**— ಈ ರೋಗದ ಪ್ರಧಾನ ಲಕ್ಷಣವೆಂದರೆ ಶರೀರದ ಮೃದುಭಾಗದಲ್ಲಿ ವ್ರಣವಾಗುತ್ತದೆ. ವ್ರಣವು ಗಟ್ಟಿ ಚೆಂಡಿನಂತೆ ಕಲ್ಲಾಗಿರುತ್ತದೆ; ಇದರಿಂದ ಶೋಥ, ಮೊಡೆತ, ನೋವು, ಉರಿಯುವಿಕೆ, ಚುಚ್ಚುವಿಕೆ ಸಹಿಸಲಸಾಧ್ಯವಾದ ವೇದನೆಯಾಗುವಿಕೆ, ತಿಂಡಿ, ತುರಿಕೆ ಹಾಗೂ ವ್ರಣ ಒಡೆದು ದುರ್ಗಂಧ ಬರುವಿಕೆ ಅಲ್ಲದೆ ಸ್ಪರ್ಶಮಾತ್ರದಿಂದ ಸಹ ರಕ್ತಸ್ರಾವವಾಗುತ್ತದೆ. ಈ ಎಲ್ಲ ಲಕ್ಷಣ ಹಾಗೂ ಭಾವನೆಗಳ ಮೂಲಕ ಮಂಗಳ, ಶನಿ, ಚಂದ್ರರೇ ಈ ರೋಗದ ಕಾರಕಗ್ರಹಗಳಿರುತ್ತಾರೆ.

**ಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಜಾತಕದ ನಿರ್ದಿಷ್ಟ ಸ್ಥಾನವೇ ಈ ರೋಗದ ಕಾರಕಸ್ಥಾನವೆಂದು ಹೇಳಲು ಬಾರದು. ಏಕೆಂದರೆ ಶರೀರದ ಯಾವದೇ ಭಾಗದಲ್ಲಿಯಾದರೂ ವ್ರಣವಾಗಬಹುದಾಗಿದೆ. ಉದಾಹರಣೆಗಾಗಿ ಕರಳು, ಯಕೃತ್ ಗಂಟಲು, ನಾಲಿಗೆ, ಮೆದುಳು, ಗರ್ಭಕೋಶ (Uterus), ಗುದನಾಳ (Rectum), ಸ್ತನಭಾಗ, ಎದೆಯಭಾಗ ಈ ಮೊದಲಾದ ಸ್ಥಾನ ಹಾಗೂ ಅಂಗಗಳ ಮೇಲೆ ವ್ರಣವಾಗುವದರಿಂದ ನಿರ್ದಿಷ್ಟ ಸ್ಥಾನವೇ ಈ ರೋಗದ ಕಾರಕಸ್ಥಾನವೆಂದು ಹೇಳವದು ಕಷ್ಟದಾಯಕವಾದುದು. ಆದರೆ ಶರೀರದ ಮೃದುಭಾಗದ ಮೇಲೆಯೂ ಹಾಗೂ ಮೇಲಿಂದ ಮೇಲೆ ಘರ್ಷಣೆಗೆ ಒಳಪಟ್ಟ ಅಂಗಗಳ ಮೇಲೆಯೂ ವ್ರಣವಾಗುವ ಸಂಭವವೇ ಹೆಚ್ಚು ಇರುತ್ತದೆ. ಆದುದರಿಂದ ನಾಲಿಗೆ, ಗಂಟಲುಗಳ ಸ್ಥಾನವಾದ ದ್ವಿತೀಯ ಸ್ಥಾನವೂ, ಎದೆ, ಸ್ತನಗಳ ಸ್ಥಾನವಾದ ಚತುರ್ಥ ಸ್ಥಾನವೂ, ಯಕೃತ್, ಪ್ಲೀಹ, ಗರ್ಭಾಶಯಗಳ ಸ್ಥಾನವಾದ ಪಂಚಮ ಸ್ಥಾನವೂ, ಕರು

ಳಿನ ಸ್ಥಾನವಾದ ಷಷ್ಠವೂ, ಗುದಸ್ಥಾನವಾದ ಅಷ್ಟಮವೂ, ಮಸ್ತಿಷ್ಕಸ್ಥಾನವಾದ ತನುಸ್ಥಾನವೂ ಈ ರೋಗದ ಪ್ರಮುಖ ಕಾರಕಸ್ಥಾನಗಳಿರುತ್ತವೆ.

**ಲಗ್ನ**:— ಈ ರೋಗದಲ್ಲಿ ರಕ್ತದೋಷವೇ ಪ್ರಮುಖ ದೋಷವಿರುವದರಿಂದ ಸಿಂಹ, ಕುಂಭ ರಾಶಿಗಳು ಜಾತಕದಲ್ಲಿ ದೂಷಿತವಿರುತ್ತವೆ. ಆದ್ದರಿಂದ ಕರ್ಕ, ಸಿಂಹ, ಕನ್ಯಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

**ರಾಶಿ** :— ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳಲು ಬಾರದು.

### ೩೫. ಮೂತ್ರಾಶ್ಮರಿ (Urinary Stones)

ಈ ವಿಕಾರವು ಹೆಚ್ಚಾಗಿ ಚಿಕ್ಕಮಕ್ಕಳಲ್ಲಿರುವದು ಕಂಡುಬಂದಿದೆ. ಒಮ್ಮೊಮ್ಮೆ ದೊಡ್ಡವರಲ್ಲಿಯೂ ಆಗುವದುಂಟು.

ಮೂತ್ರದಲ್ಲಿಯ ಖನಿಜ ಪದಾರ್ಥಗಳು ಹಾಗೂ ಸುಣ್ಣದ ಹರಳಿನಂತಿರುವ ಪದಾರ್ಥಗಳು ಕೂಡಿಕೊಂಡು ಒಂದು ಗಟ್ಟಿಯಾಕಾರವಾಗುತ್ತದೆ. ಇದರಿಂದ ಮೂತ್ರವಿಸರ್ಜನೆಯು ಸರಿಯಾಗಿ ಆಗಲಾರದು. ಇದೇ ಈ ರೋಗದ ವಿಕಾರವು.

**ಕಾರಕಗ್ರಹ**:— ಹರಳು, ಕಲ್ಲು ಗಟ್ಟಿಯನ್ನಾಗಿ ಮಾಡುವ ಕ್ರಿಯೆಯು ಶನಿಯ ಗುಣಧರ್ಮಾದ್ದಿರುತ್ತದೆ. ಇದಲ್ಲದೆ ಮೂತ್ರದ ಮೇಲೆಯೂ ಶನಿಯ ಪ್ರಭಾವವಿರುತ್ತದೆ. ಆದುದರಿಂದ ಶನಿಯೇ ಈ ರೋಗದ ಕಾರಕನು.

**ಕಾರಕಲಗ್ನ**:— ಮೂತ್ರ-ವಿಂಗಡನಾ ಕಾರ್ಯವು ತುಲಾ ರಾಶಿಯದಿರುತ್ತದೆ. ಮೂತ್ರ ವಿಸರ್ಜನಾ ಕ್ರಿಯೆಯು ವೃಶ್ಚಿಕ ರಾಶಿಯದಿರುತ್ತದೆ. ಆದುದರಿಂದ ತುಲಾ, ವೃಶ್ಚಿಕ ಈ ರಾಶಿಗಳು ದೂಷಿತವಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು. ಆದುದರಿಂದ ಮೇಷ, ವೃಷಭ, ಮಿಥುನ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಈ ರೋಗದಿಂದ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ಸ್ಥಾನ**:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಮೂತ್ರ ವಿಸರ್ಜನಾ ಕ್ರಿಯೆಯು ವಿಕೃತವಾಗುವದರಿಂದ ಅಷ್ಟಮ ಸ್ಥಾನವನ್ನೂ ಬಸ್ತಿಯಲ್ಲಿ

ದೋಷವಿರುವದರಿಂದ ಸಪ್ತಮಸ್ಥಾನವೂ ಈ ರೋಗದ ಕಾರಕಸ್ಥಾನಗಳಾಗಿರುತ್ತವೆ.

**ರಾಶಿ:—** ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ರಾಶಿಯವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡುಬಂದಿದೆ.

### ೩೬. ಮೂತ್ರಕೃಚ್ಛ್ರ (Retention of Urine) ಉರಿಮೂತ್ರ (Burning of Micturition)

ಪಿತ್ತಪ್ರಕೃತಿಯ ಕೆಲವರಿಗೆ ಬೇಸಿಗೆಯಲ್ಲಿ ಈ ವಿಕಾರ ಉಂಟಾಗುತ್ತದೆ. ಅಥವಾ ಶೀತ ಕಟಿಬಂಧದಲ್ಲಿರುವ ಜನರು ಉಷ್ಣಕಟಿಬಂಧ ಪ್ರದೇಶಕ್ಕೆ ಬಂದರೂ ಈ ವಿಕಾರ ಸಂಭವಿಸುತ್ತದೆ. ಪ್ರಾರಂಭದಲ್ಲಿ ಮೂತ್ರ ವಿಸರ್ಜನಾ ಕಾಲಕ್ಕೆ ಉರಿಯಾಗುವಿಕೆ, ತಡೆತಡೆದು ಆಗುವಿಕೆ ಇದೇ ಈ ವಿಕಾರದ ಮುಖ್ಯ ಲಕ್ಷಣ.

**ಕಾರಕಗ್ರಹ:—** ಮೂತ್ರ ವಿಸರ್ಜನೆಯ ಕ್ರಿಯೆಯ ಮೇಲೆ ಶನಿಗ್ರಹದ ಪ್ರಭಾವವಿರುವದರಿಂದ ಶನಿಯೇ ಈ ರೋಗದ ಕಾರಕನು.

**ಲಗ್ನ:—** ಮೂತ್ರಪಿಂಡದಲ್ಲಿ ಮೂತ್ರವನ್ನು ವಿಂಗಡಿಸುವ ಕಾರ್ಯದಲ್ಲಿ ವಿಕೃತಿಯುರುದದರಿಂದ ಬಸ್ತಿಯ ಮೇಲೆ ಆಧಿಪತ್ಯ ಹೊಂದಿದ ತುಲಾ ರಾಶಿ ದೂಷಿತವಿರದೆ ಯಾರಿಗೂ ಈ ವಿಕಾರವಾಗಲಾರದು. ಅದರಂತೆಯೇ ಮೂತ್ರ ವಿಸರ್ಜನೆಯಾಗುವಾಗ ತಡೆತಡೆದು ಆಗುವಿಕೆ, ಉರಿಯಾಗುವಿಕೆ ಇದು ವೃಶ್ಚಿಕ ರಾಶಿಯ ಗುಣಧರ್ಮವಿರುತ್ತದೆ. ಆದುದರಿಂದ ಮೇಷ, ವೃಷಭ, ಮಿಥುನ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಈ ರೋಗದಿಂದ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಈ ರೋಗಿಗಳನ್ನು ಎರಡು ವರ್ಗದ ರಾಶಿಯವರನ್ನಾಗಿ ವಿಂಗಡಿಸಬಹುದು.

೧) ಪಿತ್ತಪ್ರಕೃತಿಯ ರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿಗೆ ಬೇಸಿಗೆಯಲ್ಲಿ ಈ ವಿಕಾರ ಉಂಟಾಗುತ್ತದೆ.

೨) ಶೀತಕಟಿಬಂಧದಿಂದ ಉಷ್ಣಕಟಿಬಂಧಕ್ಕೆ ಬರುವ ಕರ್ಕ, ವೃಶ್ಚಿಕ, ಮೀನ ಈ ರಾಶಿಯವರಿಗೆ ಈ ವಿಕಾರವುಂಟಾಗುತ್ತದೆ.

**ಯೋಗಗಳು:**— ಜಲರಾಶಿಯ ಚಂದ್ರನು ಷಷ್ಠದಲ್ಲಿದ್ದು ಷಷ್ಠೇಶನು ಜಲರಾಶಿಯಲ್ಲಿದ್ದು ಬುಧನಿಂದ ನೋಡಲ್ಪಡುತ್ತಿದ್ದರೆ ಮೂತ್ರಕೃಚ್ಛ್ರ ವಿಕಾರ ಉಂಟಾಗುತ್ತದೆ.

## ೩೭. ಹರ್ನಿಯಾ (ಅಂತರ್‌ಗಳ)

ಹೊಟ್ಟೆಯಲ್ಲಿಯ ಕರುಳು ವೃಷಣ(ತರಡು)ದ ಕೆಳಭಾಗಕ್ಕೆ ಇಳಿಯುವ ಕ್ರಿಯೆಗೆ "ಹರ್ನಿಯಾ" ಎನ್ನುತ್ತಾರೆ. ಇದರಲ್ಲಿ ವೃಷಣದ ಒಂದು ಬದಿ ಇಲ್ಲವೆ ಎರಡೂ ಬದಿಗಳು ದಪ್ಪವಾಗಿ ಗಟ್ಟಿಯಾಗುತ್ತವೆ.

**ಕಾರಕಗ್ರಹ :**— ಹರ್ನಿಯಾವನ್ನುಂಟುಮಾಡುವ ಗುಣಧರ್ಮವು ಶನಿ ಗ್ರಹದಲ್ಲಿ ಇರುತ್ತದೆ. ಆದುದರಿಂದ ಶನಿಯೇ ಈ ರೋಗದ ಕಾರಕನು.

**ಲಗ್ನ:**— ವೃಷಣದಲ್ಲಿ ವಿಕೃತಿಯಾಗುವ ಗುಣಧರ್ಮವು ವೃಶ್ಚಿಕ ರಾಶಿಯದಿರುತ್ತದೆ. ಏಕೆಂದರೆ ವೃಷಣದ ಮೇಲೆ ವೃಶ್ಚಿಕ ರಾಶಿಯ ಆಧಿಪತ್ಯವಿರುತ್ತದೆ. ವೃಶ್ಚಿಕರಾಶಿ ದೂಷಿತವಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು. ಆದುದರಿಂದ ಮೇಷ, ಮಿಥುನ, ಧನು ಈ ಲಗ್ನದವರೇ ಹೆಚ್ಚಾಗಿ ಈ ವಿಕಾರದಿಂದ ಬಳಲುವದು ಕಂಡುಬಂದಿದೆ.

**ಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಣದ ಸ್ಥಾನವಾದ ಅಷ್ಟಮ ಸ್ಥಾನವೇ ಈ ವಿಕಾರದ ಕಾರಕಸ್ಥಾನವು. ಆದ್ದರಿಂದ ಅಷ್ಟಮ ಸ್ಥಾನ, ಅಷ್ಟಮೇಶ ದುರ್ಬಲರಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ರಾಶಿ:**— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರು ಎಂದು ಹೇಳಲು ಬರುವದಿಲ್ಲ. ಆದರೆ ವೃಷಭ, ವೃಶ್ಚಿಕ ಈ ರಾಶಿಗಳು ಷಷ್ಠ, ಅಷ್ಟಮ, ವ್ಯಯ, ಸಪ್ತಮ ಈ ಸ್ಥಾನದಲ್ಲಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟಿದ್ದರೆ ಅಥವಾ ಈ ರಾಶಿಗಳು ಷಷ್ಠ, ಅಷ್ಟಮ, ವ್ಯಯ, ಸಪ್ತಮ ಈ ಸ್ಥಾನದಲ್ಲಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟಿದ್ದರೆ ಅಥವಾ ಈ ರಾಶಿಗಳು ದೂಷಿತವಿದ್ದರೆ ಇಂಥ ಜನರು ಈ ವಿಕಾರದಿಂದ ಬಳಲುವದು.

**ಯೋಗಗಳು :—** ಈ ಕೆಳಗೆ ತೋರಿಸಿದ ಆರು ಯೋಗಗಳಲ್ಲಿ ಯಾವದೊಂದು ಜಾತಕದಲ್ಲಿದ್ದ ಜಾತಕನಿಗೆ 'ಹರ್ನಿಯಾ' ಉಂಟಾಗುತ್ತದೆ.

೧) ವೃಷಭ ಇಲ್ಲವೆ ವೃಶ್ಚಿಕ ರಾಶಿಯ ಶನಿಯು ಷಷ್ಠ, ಸಪ್ತಮ, ಅಷ್ಟಮ ವ್ಯಯದಲ್ಲಿದ್ದರೆ,

೨) ರವಿ–ಶನಿಯರ ಸಮಸಪ್ತಕ ವೃಷಭ, ವೃಶ್ಚಿಕ ರಾಶಿಯಲ್ಲಿದ್ದರೆ,

೩) ಅಷ್ಟಮದಲ್ಲಿ ಚಂದ್ರನಿದ್ದು ಶನಿಯಿಂದ ನೋಡಲ್ಪಟ್ಟರೆ,

೪) ಶನಿ–ಮಂಗಳರ ಪ್ರತಿಯೋಗ ವೃಷಭ, ವೃಶ್ಚಿಕದಲ್ಲಿದ್ದರೆ,

೫) ಮಂಗಳ, ರವಿ, ರಾಹುಗಳು ವೃಷಭ, ವೃಶ್ಚಿಕದಲ್ಲಿದ್ದರೆ,

೬) ಚಂದ್ರ, ಮಂಗಳ, ಶನಿ, ರಾಹು, ರವಿ ಈ ಐದು ಗ್ರಹಗಳಲ್ಲಿ ಯಾವದೇ ಎರಡು ಗ್ರಹಗಳು ಅಷ್ಟಮದಲ್ಲಿದ್ದರೆ.

## ೩೮. ವೃಷಣವೃದ್ಧಿ

ವೃಷಣ(ತರಡು)ವೃದ್ಧಿಯಲ್ಲಿಯ ಎರಡೂ ಬದಿಗಳಲ್ಲಿ ನೀರು ತುಂಬಿ ಅದರಿಂದ ವೃಷಣವೃದ್ಧಿಯಾಗುವಿಕೆ ಅಥವಾ ಲಸಿಕೆ ತುಂಬುವಿಕೆ ಅಥವಾ ಬೀಜಕ್ಕೆ ಬಾವು ಬರುವಿಕೆ ಇವೇ ಇದರ ಮುಖ್ಯ ಲಕ್ಷಣವಿರುತ್ತವೆ.

**ಕಾರಕಗ್ರಹ :—** ಈ ವಿಕಾರವು ಕಫ–ವಾತ ಪ್ರಧಾನವಿರುವದ ರಿಂದ ಶುಕ್ರನೇ ಈ ರೋಗದ ಕಾರಕನು. ಶುಕ್ರನ ತರುವಾಯ ಚಂದ್ರನೂ ಕಾರಕನಿರುವನು. ಏಕೆಂದರೆ ನೀರು ತುಂಬುವ ಗುಣಧರ್ಮವು ಚಂದ್ರನ ಗುಣ ಧರ್ಮವಿರುತ್ತದೆ.

**ಕಾರಕಲಗ್ನ :—** ವೃಷಣದ ಮೇಲೆ ವೃಶ್ಚಿಕ ರಾಶಿಯ ಆಧಿಪತ್ಯವಿರುತ್ತದೆ. ವೃಶ್ಚಿಕರಾಶಿ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮೇಷ, ಮಿಥುನ, ಧನು ಈ ಲಗ್ನದವರೇ ಈ ವಿಕಾರದಿಂದ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ಸ್ಥಾನ :** ವೃಷಣದ ಸ್ಥಾನವಾದ ಅಷ್ಟಮ ಸ್ಥಾನವೇ ಈ ವಿಕಾರದ ಕಾರಕಸ್ಥಾನವಿರುವದರಿಂದ ಅಷ್ಟಮ ಸ್ಥಾನ ಹಾಗೂ ಅಷ್ಟಮೇಶ ದೂಷಿತ ವಿರದೆ ಯಾರಿಗೂ ಈ ವಿಕಾರ ಬರಲಾರದು.

ರಾಶಿ: — ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳಲು ಬಾರದು.

**ಯೋಗಗಳು**

೧) ಮೇಷ, ಮಿಥುನ, ಧನು ಈ ಯಾವುದೊಂದು ಲಗ್ನವಿದ್ದು, ಶನಿ–ಗುರು, ಶುಕ್ರ–ರಾಹು, ರಾಹು–ಚಂದ್ರ ಇವರ ಯುತಿ-ಪ್ರತಿಯೋಗ ವಿದ್ದರೆ,

೨) ಷಷ್ಠಾಧಿಪತಿ ಬುಧನೊಂದಿಗೆ ಕೂಡಿಕೊಂಡು, ಲಗ್ನದಲ್ಲಿದ್ದರೆ ಶಿಸ್ನವ್ಯಾಧಿಯಾಗುತ್ತದೆ.

೩) ಷಷ್ಠಾಷ್ಟಮ ಅಧೀಶರು ಶನಿಯೊಂದಿಗೆ ಲಗ್ನದಲ್ಲಿದ್ದರೆ ಲಿಂಗ ದಲ್ಲಿ ರೋಗವುಂಟಾಗಿ ಶಸ್ತ್ರಕ್ರಿಯೆಯಾಗಬೇಕಾಗುತ್ತದೆ.

೪) ಶುಕ್ರ ಅಂಗಾರಕರು ಲಗ್ನ–ಸಪ್ತಮದಲ್ಲಿದ್ದು ಪಾಪಗ್ರಹಗಳಿಂದ ನೋಡಲ್ಪಟ್ಟರೆ,

ಅಂಡವೃದ್ಧಿಯಾಗುವದು.

## ೩೯. ಸಂಧಿವಾತ-ಆಮವಾತ (Rheumatism)

ಇದರಲ್ಲಿ ದೇಹದ ಸಂದುಗಳು–ಅದರಲ್ಲಿಯೂ ಮೊಳಕೈ-ಮೊಳಕಾಲು, ತೊಡೆ, ಹಿಮ್ಮಡ, ಮೀನಗಂಡ ಇವುಗಳ ಸಂಧಿಗಳು ಬಾಯುವದು ಹಾಗೂ ಅಲ್ಲಿ ಹೊಡೆತ ಸೆಳೆತ ನೋವು ಇರುತ್ತದೆ. ಅಂತೆಯೇ ಇದಕ್ಕೆ ಸಂಧಿವಾತ ವೆಂಬ ಹೆಸರು ಯಥಾರ್ಥವಿದೆ. ಆಯುರ್ವೇದದಲ್ಲಿ ಇದಕ್ಕೆ ಆಮವಾತ ವೆನ್ನುವರು. ಈ ರೋಗ ಹೆಚ್ಚಾಗಿ ಶೀತಕಾಲದಲ್ಲಿಯೂ, ಶೀತಲ ಪ್ರದೇಶ ದಲ್ಲಿಯೂ— ಹೆಂಗಸರಿಗಿಂತ ಗಂಡಸರಿಗೂ — ಇದರ ಉಪದ್ರವ ಬಹಳ. ಇನ್ನು ಫಲಜ್ಯೋತಿಷ್ಯದಲ್ಲಿ ಈ ರೋಗದ ಕಾರಕಗ್ರಹ, ರಾಶಿ, ಸ್ಥಾನ, ಲಗ್ನಾದಿಗಳನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಹೊಡೆತ, ಶೂಲ, ನೋವು, ಬಾವು ಇವು ಪ್ರಧಾನ ಲಕ್ಷಣವಿರುವದರಿಂದಲೂ ರೋಗದ ಹೆಸರೂ ಸಹ ವಾತಪ್ರಧಾನ ದೋಷ ಸೂಚಿಸುವದರಿಂದಲೂ ಸಂಧಿಗಳ ಮೇಲೆಯೂ, ಮೊಳಕಾಲುಗಳ ಮೇಲೂ

ಮಕರರಾಶಿಯ ಆಧಿಪತ್ಯವಿರುವದರಿಂದಲೂ ಶನಿಯೇ ಈ ರೋಗದ ಕಾರಕನು. ಇದಲ್ಲದೆ ಚಲನವಲನ ಕ್ರಿಯೆಯಲ್ಲಿ ಅವರೋಧನವಾಗುವ ಗುಣ ಧರ್ಮವೂ ಸಹ ಶನಿಯದೇ ಇರುತ್ತದೆ. ಆದುದರಿಂದ ಶನಿಯು ದೂಷಿತ ನಿರದೆ ಯಾರಿಗೂ ಈ ರೋಗ ಬರಲಾರದು.

ಶನಿಯ ತರುವಾಯ ರವಿಯೂ ಈ ರೋಗದ ಕಾರಕನು. ಏಕೆಂದರೆ ಈ ರೋಗದಲ್ಲಿ ಜ್ವರವು ತೀವ್ರವಿರುವದಲ್ಲದೆ ಸಂದುಗಳು ಕೆಂಪು ಬಣ್ಣದಿಂದ ಉಬ್ಬಿಕೊಂಡಿರುತ್ತವೆ. ಇದಲ್ಲದೆ ಈ ರೋಗದಲ್ಲಿ ಹೃದಯದ ಆವರಣಗಳು ಊದಿಕೊಂಡಿರುತ್ತವೆ. ಹೃದಯವು ದೂಷಿತವಾಗಿ ಸಂಪುಟಗಳು ಕೆಡುವ ಸಂಭವವೂ ಇರುತ್ತದೆ. ಹೃದಯ ಹಾಗೂ ಜ್ವರದ ಮೇಲೆ ರವಿಯ ಆಧಿ ಪತ್ಯವಿರುವದರಿಂದ ರವಿಯೂ ಈ ರೋಗದ ಕಾರಕನು.

ಶನಿ-ರವಿಯರ ತರುವಾಯ ಶುಕ್ರನೂ ಕೆಲಮಟ್ಟಿಗೆ ಕಾರಕನು. ಏಕೆಂ-ದರೆ ಗರ್ಮಿ, ಪರ್ಮಾಗಳಲ್ಲಿ ಸಂಧಿವಾತವು ಉಪದ್ರವರೂಪವಾಗಿ ಬರುವದ ರಿಂದ ಗರ್ಮಿ, ಪರ್ಮಾ ರೋಗಗಳ ಕಾರಕನಾದ ಶುಕ್ರನೂ ಈ ರೋಗದ ಕಾರಕನಾಗಿರುವನು.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟಸ್ಥಾನವೇ ಈ ರೋಗದ ಕಾರಕವೆಂದು ಹೇಳಲು ಬಾರದು. ಶರೀರದ ಎಲ್ಲ ಸಂದುಗಳೇ ಪ್ರಮುಖ ದೂಷಿತವಿರುತ್ತವೆ. ಅದರಲ್ಲಿಯೂ ತೊಡೆಯ ಸಂದುಗಳು ದೂಷಿತವಿರುವದರಿಂದ ನವಮ ಸ್ಥಾನವೂ ಮೊಳಕಾಲು ಸಂದುಗಳು ದೂಷಿತ ವಿರುವದರಿಂದ ದಶಮ ಸ್ಥಾನವೂ ಹಿಮ್ಮಡದಲ್ಲಿ ನೋವು ಇರುವದರಿಂದ ಏಕಾದಶ ಸ್ಥಾನವೂ ಹೃದಯವು ಕೆಲಮಟ್ಟಿಗೆ ದೂಷಿತವಿರುವದರಿಂದ ಚತುರ್ಥ ಸ್ಥಾನವೂ ಪ್ರಮುಖ ಕಾರಕಸ್ಥಾನಗಳೆಂದು ಹೇಳಬಹುದು.

ಲಗ್ನ :— ಶರೀರದ ಯಾವದೇ ಸಂದುಗಳ ಮೇಲೆ ಮಕರರಾಶಿಯು ಅಧಿಪತಿಯಾಗಿರುವದು. ಮಕರ ರಾಶಿಯು ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮಿಥುನ, ಸಿಂಹ, ತುಲಾ, ಕುಂಭ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುವದು ಕಂಡು ಬಂದಿದೆ. ಈ ರೋಗದಲ್ಲಿ ಸ್ನಾಯು, ಅಸ್ಥಿ, ಅಸ್ಥಿಬಂಧನ ದೂಷಿತವಿರುತ್ತವೆ.

ಸ್ನಾಯು, ಅಸ್ತಿಗಳ ಮೇಲೆ ಧನುರಾಶಿಯ ಪ್ರಭಾವವಿರುವದರಿಂದ ಜಾತಕದಲ್ಲಿ ಧನುರಾಶಿಯೂ ದೂಷಿತವಿರುತ್ತದೆ. ಆದ್ದರಿಂದ ವೃಷಭ, ಕರ್ಕ, ಮಕರ ಈ ಲಗ್ನದವರೂ ಸಹ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ :—** ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುತ್ತಿರುವರೆಂದು ಹೇಳಲು ಬಾರದು. ಆದರೆ ಸ್ನಾಯುಗಳ ಮೇಲೆ ಆಧಿಪತ್ಯಹೊಂದಿದ ಧನುರಾಶಿಯು ಮೊಳಕಾಲಿನ ಮೇಲೆ ಆಧಿಪತ್ಯ ಹೊಂದಿದ ಮಕರರಾಶಿಯೂ ಹಿಮ್ಮಡ ಮೇಲೆ ಆಧಿಪತ್ಯ ಹೊಂದಿದ ಕುಂಭರಾಶಿಯೂ, ಮೊಳಕೈ ಮೇಲೆ ಆಧಿಪತ್ಯ ಹೊಂದಿದ ಮಿಥುನ ರಾಶಿಯೂ ಹೃದಯದ ಮೇಲೆ ಆಧಿಪತ್ಯ ಹೊಂದಿದ ಸಿಂಹರಾಶಿಯೂ ಯಾರ ಜಾತಕದಲ್ಲಿ ದೂಷಿತವಿರುತ್ತವೆಯೋ ಆ ರಾಶಿಯವರು ಈ ರೋಗದದಿಂದ ಬಳಲುವರು.

**ಯೋಗಗಳು**

೧) ರವಿ–ಬುಧರು ಮಕರರಾಶಿಯಲ್ಲಿದ್ದು, ಶನಿಯು ಮೇಷರಾಶಿಯಲ್ಲಿದ್ದರೆ ಸಂಧಿವಾತ ನಿರ್ಮಾಣ ಮಾಡುತ್ತಾನೆ.

೨) ಮಿಥುನ ರಾಶಿಯ ಶನಿಯು ಷಷ್ಠ, ಅಷ್ಟಮ, ದ್ವಾದಶದಲ್ಲಿದ್ದರೆ ಮೊಳಕೈ ಸಂಧಿವಾತ ನಿರ್ಮಾಣಮಾಡುತ್ತಾನೆ.

೩) ಮಿಥುನ, ಕರ್ಕ, ಸಿಂಹ, ಕನ್ಯಾ, ಕುಂಭ ಈ ಲಗ್ನಗಳಿದ್ದು, ಶನಿಯು ಷಷ್ಠ, ಅಷ್ಟಮ, ದ್ವಾದಶ ಈ ಯಾವದೊಂದು ಸ್ಥಾನದಲ್ಲಿದ್ದು ರವಿ, ಚಂದ್ರ, ಮಂಗಳ ಇವರೊಂದಿಗೆ ಪ್ರತಿಯೋಗ ಮಾಡುತ್ತಿದ್ದರೆ ಸಂಧಿವಾತ ನಿರ್ಮಾಣವಾಗುತ್ತದೆ.

## ೪೦. ವಾತರಕ್ತ (Gout)

ಈ ವಿಕಾರವು ಸಾಮಾನ್ಯವಾಗಿ ಶ್ರೀಮಂತರದು. ವ್ಯಾಯಾಮಮಾಡದೆ ಅತಿ ಪೌಷ್ಟಿಕ ಆಹಾರವನ್ನು ಸೇವಿಸುವ ಮೇಧಾವೃದ್ಧಿ (ಬೊಜ್ಜು) ಯಾದ ಸ್ಥೂಲ ದೇಹದ ಸುಖಿ ವರ್ಗದ ನಾಲ್ವತ್ತು ವಯಸ್ಸಿನ ಮೇಲಿನವರಿಗೆ ಇದರ ಉಪದ್ರವ ಬಹಳ.

ಸಂಧಿವಾತದಂತೆ ಈ ರೋಗದಲ್ಲಿಯೂ ಸಹ ಸಂದುಗಳು ಬಾಯುತ್ತವೆ.

ಆದರೆ ಕೈ-ಕಾಲುಗಳ ಬೆರಳುಗಳೇ ಮೊದಲಾದ ಸಣ್ಣ ಸಂದುಗಳು ಮಾತ್ರ ಬಾತುಕೊಂಡು ಹೊಡೆಯುವದೇ ಈ ರೋಗದ ಮುಖ್ಯ ಲಕ್ಷಣವಾಗಿದೆ.

**ಕಾರಕಗ್ರಹ :—** ಕೈ-ಕಾಲುಗಳ ಬೆರಳುಗಳಲ್ಲಿ ನೋವು, ಸೆಳೆತ, ಹೊಡೆತ, ಸಂಧಿಗಳು ಸಡಿಲಾಗುವಿಕೆ, ಸ್ಪರ್ಶ ಸಹ ಗೊತ್ತಾಗದಿರುವಿಕೆ ಇವೇ ಈ ರೋಗದ ಪ್ರಧಾನ ಲಕ್ಷಣಗಳಿರುವದರಿಂದ ವಾತದೋಷವೇ ಪ್ರಮುಖ ವಿರುತ್ತದೆ. ಇದಲ್ಲದೆ ಈ ರೋಗವು ಹೆಚ್ಚಾಗಿ ವೃಧ್ಯಾಪ್ಯದಲ್ಲಿ ಬರುತ್ತದೆ. ಆದುದರಿಂದ ವಾತದೋಷದ ಕಾರಕನೂ, ವೃದ್ಧಾಪ್ಯ ರೋಗಗಳ ಕಾರಕನೂ ಆದ ಶನಿಯೇ ಈ ರೋಗದ ಕಾರಕನು.

ಮೈಮೇಲೆ ಗಾಲಿ ಏಳುವಿಕೆ, ತೊಗಲಿಗೆ ಗವಗವ ತಿಂಡಿ ಬರುವಿಕೆ, ಅಗ್ನಿಮಾಂದ್ಯ ಇರುವಿಕೆ, ಮೂತ್ರದ ಪ್ರವೃತ್ತಿ ಹೆಚ್ಚಾಗುವಿಕೆ, ಯಕೃತ್ತದಲ್ಲಿಯೂ ದೋಷವಿರುವಿಕೆ ಈ ಲಕ್ಷಣಗಳು ಈ ರೋಗದಲ್ಲಿರುವದರಿಂದ ಕಫದೋಷವೂ ಕೆಲಮಟ್ಟಿಗೆ ಇರುತ್ತದೆ. ಆದುದರಿಂದ ಗುರು-ಚಂದ್ರರು ಈ ರೋಗದ ಕಾರಕರಿರುತ್ತಾರೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಸಪ್ತಮಸ್ಥಾನವೇ ಈ ರೋಗದ ಕಾರಕಸ್ಥಾನವಿರುತ್ತದೆ. ಏಕೆಂದರೆ ಈ ರೋಗದಲ್ಲಿ ಮೂತ್ರವನ್ನು ವಿಂಗಡಿಸುವ ಕಾರ್ಯ ಚೆನ್ನಾಗಿ ಆಗದೆ ಮೂತ್ರಪಿಂಡ (ಬಸ್ತಿ) ಗಳು ತಮ್ಮ ಸಾರ, ಕಿಟ್ಟ ಭಾಗಗಳನ್ನು ಬೇರ್ಪಡಿಸುವ ಕಾರ್ಯದಲ್ಲಿ ಅಸಮರ್ಥವಾಗಿ ರಕ್ತದಲ್ಲಿಯ ಕಿಟ್ಟವು ಮೂತ್ರಮಾರ್ಗವಾಗಿ ಹೊರಬೀಳದೆ ರಕ್ತದಲ್ಲಿಯೆಯೇ ಉಳಿದು ಶರೀರದ ಬೇರೆ ಬೇರೆ ಅವಯವಗಳ ಸಂದುಗಳಲ್ಲಿ ಸಂಚರಿಸುವದರಿಂದ ಈ ರೋಗ ಉಂಟಾಗುತ್ತದೆ. ಆದುದರಿಂದ ಬಸ್ತಿಸ್ಥಾನವಾದ ಸಪ್ತಮ ಹಾಗೂ ಸಪ್ತಮೇಶ ದೂಷಿತರಿರದೇ ಯಾರಿಗೂ ಈ ರೋಗ ಬರಲಾರದು.

**ಲಗ್ನ :—** ಕೈ-ಬೆರಳುಗಳ ಮೇಲ ಮಿಥುನರಾಶಿಯ ಆಧಿಪತ್ಯವು, ಕಾಲ್ಬೆರಳುಗಳ ಮೇಲೆ ಮೀನರಾಶಿಯ ಆಧಿಪತ್ಯವೂ ಇರುತ್ತದೆ. ಮಿಥುನ-ಮೀನ ಈ ರಾಶಿಗಳು ದೂಷಿತವಿರದೆ ಯಾರಿಗೂ ಈ ರೋಗವು ಬರುವ

ದಿಲ್ಲ. ಆದ್ದರಿಂದ ಮೇಷ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಮಕರ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬರುತ್ತದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುತ್ತಿರುವರೆಂದು ಹೇಳುವದು ಅಸಾಧ್ಯ. ಆದರೆ ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ, ಮೀನ ಈ ರಾಶಿಯವರೇ ಹೆಚ್ಚಾಗಿ ಇರುವದು ಕಂಡುಬಂದಿದೆ.

**ಯೋಗಗಳು**

೧) ಅಷ್ಟಮೇಶ, ಸಪ್ತಮೇಶ ದುರ್ಬಲರಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟರೆ,

೨) ಗುರು, ಶನಿಯರ ಯುತಿಯೋಗವು ಅಗ್ನಿರಾಶಿಯಲ್ಲಿದ್ದು ಅಷ್ಟಮ ಸಪ್ತಮ, ದ್ವಾದಶ ಈ ಸ್ಥಾನದಲ್ಲಿದ್ದರೆ,

೩) ಚಂದ್ರನು ಧನುರಾಶಿಯಲ್ಲಿದ್ದು, ಬುಧನು ಮೀನರಾಶಿಯಲ್ಲಿದ್ದರೆ ಅಥವಾ ಶುಕ್ರನು ಧನು, ಮೀನ ರಾಶಿಗಳಲ್ಲಿದ್ದು, ಮಂಗಳನು ಮಕರ ರಾಶಿಯಲ್ಲಿದ್ದರೆ,

ಈ ರೋಗವು ಉಂಟಾಗುತ್ತದೆ.

## ೪೧. ಗೃಧ್ರಸೀವಾತ (Sciatica)
## ಜಂಘಾಪೃಷ್ಠಶೂಲ

ವಾತರೋಗಗಳಲ್ಲಿ ಹೆಚ್ಚು ತ್ರಾಸದಾಯಕ ರೋಗವೆಂದರೆ ಗೃಧ್ರಸೀವಾತವೆನ್ನಬಹುದು. ಏಕೆಂದರೆ ಈ ರೋಗದಲ್ಲಿ ಶೂಲವು ತೀವ್ರವಿರುವದರಿಂದ ರೋಗಿಗಳು ಅನೇಕ ರಾತ್ರಿಗಳನ್ನು ಜಾಗರಣೆಯಲ್ಲಿ ಕಳೆಯುತ್ತಾರೆ.

ಜಂಘಾ ಪೃಷ್ಠಶೂಲವೆಂದರೆ ಟೊಂಕದ ಹಿಂಭಾಗದಿಂದ ಕೆಳಗಡೆಯ ತುದಿಗಳು ಮೊಳಕಾಲಿನ ಮೀನಗಂಡಗಳಿಂದ ಪಾದಗಳವರೆಗಿನ ಭಾಗಗಳು ಶೂಲ ಚುಚ್ಚಿದಂತೆ ನೋವನ್ನುಂಟುಮಾಡುತ್ತವೆ. ಒಮ್ಮೊಮ್ಮೆ ಇಡೀ ದೇಹವೇ ನಡುಗಹತ್ತುತ್ತದೆ.

**ಕಾರಕಗ್ರಹ:** ರೋಗದ ಹೆಸರೇ ಸೂಚಿಸುವಂತೆ ವಾತವೇ ಪ್ರಧಾನ ದೋಷವಿರುವದರಿಂದ ಶನಿಯು ಈ ರೋಗದ ಕಾರಕನು. ಶನಿಯ ನಂತರ

ಶುಕ್ರನೂ ಈ ರೋಗದ ಕಾರಕನು. ಏಕೆಂದರೆ ಈ ರೋಗದಲ್ಲಿ ಕಫವೂ ಕೆಲಮಟ್ಟಿಗೆ ದೂಷಿತವಿರುತ್ತದೆ. ಇದಲ್ಲದೆ ಗನೋರಿಯಾ—ಉಪದಂಶ ರೋಗಗಳಲ್ಲಿ ಈ ವಿಕಾರವು ಉಪದ್ರವವಾಗಿ ಬರುತ್ತದೆ. ಆದುದರಿಂದ ವಾತ-ಕಫ ದ್ವಿದೋಷಗಳ ಕಾರಕನೂ, ಗನೋರಿಯಾ-ಉಪದಂಶಗಳ ಕಾರಕನೂ ಆದ ಶುಕ್ರನೇ ಈ ರೋಗದ ಕಾರಕನಿರುತ್ತಾನೆ.

**ಕಾರಕಲಗ್ನ :** ಈ ರೋಗದಲ್ಲಿ ಟೊಂಕದಿಂದ ಕೆಳಗೆ ಹೋಗಿರುವ ದೊಡ್ಡ ಶಿರೆಯು ಒಳಗೆ ಬಾಯುವದೇ ಮುಖ್ಯ ಲಕ್ಷಣವಿರುತ್ತದೆ. ಅದರಿಂದ ಹೊಡೆತ, ಸೆಳೆತ, ನೋವು ಉಂಟಾಗುತ್ತವೆ. ಶಿರೆ-ಧಮನಿಗಳ ಮೇಲೆ ಧನುರಾಶಿಯ ಪ್ರಭಾವವಿರುವದರಿಂದ ಧನುರಾಶಿ ದೂಷಿತವಿರದೆ ಯಾರಿಗೂ ಈ ರೋಗವು ಬರಲಾರದು. ಆದುದರಿಂದ ವೃಷಭ, ಮೀನ, ಕರ್ಕ, ಕುಂಭ, ಮಕರ, ಮೇಷ ಈ ಲಗ್ನದವರೇ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

**ಸ್ಥಾನ:** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತೊಡೆ, ಮೊಳಕಾಲು, ಮೀನಗಂಡ ಇವುಗಳಲ್ಲಿಯೇ ವಿಕಾರವಿರುವದರಿಂದ ನವಮ, ದಶಮ, ಏಕಾದಶ ಈ ಸ್ಥಾನಗಳೇ ಈ ರೋಗದ ಕಾರಕಸ್ಥಾನಗಳು.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳುವದು ಕಠಿಣ. ಆದರೆ ತೊಡೆಗಳ ಮೇಲೆ ಧನು ರಾಶಿಯು, ಮೊಳಕಾಲಿನ ಮೇಲೆ ಮಕರ ರಾಶಿಯ, ಮೀನಗಂಡದ ಮೇಲೆ ಕುಂಭ ರಾಶಿಯ ಆಧಿಪತ್ಯವಿರುತ್ತದೆ. ಆದ್ದರಿಂದ ಈ ಮೂರೂ ರಾಶಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಆ ರಾಶಿಯ ಜನರೇ ಈ ರೋಗದಿಂದ ಬಳಲುತ್ತಾರೆ.

**ಯೋಗಗಳು**

೧) ಷಷ್ಠ, ಅಷ್ಟಮ, ನವಮ ಈ ಸ್ಥಾನಗಳಲ್ಲಿ ಧನುರಾಶಿಯಿದ್ದು, ಅಂದರೆ ಮೇಷ, ವೃಷಭ, ಕರ್ಕ ಲಗ್ನವಿದ್ದು ರವಿ, ಚಂದ್ರ, ಮಂಗಳ, ಬುಧ, ಶನಿ ಈ ಐದು ಗ್ರಹಗಳಲ್ಲಿ ಯಾವದೇ ಎರಡು ಗ್ರಹಗಳ ಯೋಗವು ಷಷ್ಠ, ಅಷ್ಟಮ, ನವಮ ಸ್ಥಾನದಲ್ಲಿದ್ದರೆ ಈ ರೋಗವುಂಟಾಗುತ್ತದೆ.

೨) ಮಿಥುನ, ಕರ್ಕ, ವೃಶ್ಚಿಕ ಮಕರ ಈ ಲಗ್ನಗಳಿದ್ದು ಮೇಲಿನ ಐದು ಗ್ರಹಗಳಲ್ಲಿ ಯಾವದೇ ಎರಡು ಗ್ರಹಗಳ ಯುತಿಯೋಗವು ಲಗ್ನ, ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನದಲ್ಲಿದ್ದರೆ ಈ ರೋಗದ ಭೀತಿ ಇರುತ್ತದೆ.

## ೪೨. ಪಕ್ಷಾಘಾತ — ಅರ್ಧಾಂಗವಾಯು (Paralysis)

ಅರ್ಧಾಂಗವಾಯುವಿಗೆ ಪಕ್ಷಾಘಾತವೆಂತಲೂ ವಾಡಿಕೆಯಲ್ಲಿರುವ ಹೆಸರು. ಇದಲ್ಲದೆ ಏಕಾಂಗವಾತ, ಅರ್ಧಿತವಾತ, ಪಕ್ಷವಧ ಎಂಬ ಅನೇಕ ಪ್ರಕಾರಗಳೂ ಉಂಟು. ಸಾಮಾನ್ಯವಾಗಿ ಈ ರೋಗವು ಮುಪ್ಪಿನಲ್ಲಿ ಹೆಚ್ಚಾಗಿ ಬರುತ್ತದೆ. ಬಾಲಕರಲ್ಲಿ ಕ್ವಚಿತವಾಗಿ ಕಾಣಸುತ್ತದೆ. ಹೆಂಗಸರಿಗಿಂತ ಗಂಡಸರಿಗೆ ಇದರ ಉಪದ್ರವ ಬಹಳ. ಶರೀರದ ಯಾವದೊಂದು ಭಾಗದ ಅಂಗಗಳನ್ನಾಗಲೀ ಅಥವಾ ಯಾವದೊಂದು ವಿಶಿಷ್ಟ ಅಂಗವನ್ನಾಗಲೀ ನಿರುಪಯೋಗಮಾಡುವಿಕೆ ಅರ್ಥಾತ್ ನಿಷ್ಕ್ರಿಯವನ್ನಾಗಿ ಮಾಡುವದೇ ಈ ರೋಗದ ಪ್ರಧಾನ ಲಕ್ಷಣವು. ಇನ್ನು ಫಲಜ್ಯೋತಿಷ್ಯದಲ್ಲಿ ಈ ರೋಗದ ವಿಷಯವಾಗಿ ಜೋತಿಷ್ಯದ ಭಾಷ್ಯವೇನು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:**—ಮಸ್ತಿಷ್ಕದಲ್ಲಿಯ ಒಂದು ಭಾಗದಲ್ಲಿ ರಕ್ತ-ಸಂಚಯವಾದರೆ ಅಥವಾ ರಕ್ತಸ್ರಾವವಾದರೆ ಇನ್ನೊಂದು ಭಾಗ ಜೋತಾಡುತ್ತದೆ, ಅರ್ಥಾತ್ ನಿಷ್ಕ್ರಿಯವಾಗುತ್ತದೆ. ಉದಾಹರಣೆ ಮಸ್ತಿಷ್ಕದ ಬಲಭಾಗದಲ್ಲಿ ವಿಕೃತಿ (ದೋಷ)ಯಾದರೆ ಶರೀರದ ಎಡಭಾಗ ನಿಷ್ಕ್ರಿಯವಾಗುತ್ತದೆ. ಇದಲ್ಲದೆ ಶರೀರದ ಬೆನ್ನುಹುರಿಯಲ್ಲಿ ವಿಕೃತಿಯಾದರೂ ಈ ವಿಕಾರವುಂಟಾಗುತ್ತದೆ. ಬೆನ್ನುಹುರಿಯ ಕೆಳಭಾಗದಲ್ಲಿ ವಿಕೃತಿಯಾದರೆ ಚಲನ-ವಲನವನ್ನು ನಿಯಂತ್ರಿಸುವ ಕಾರಣ ಕಾಲುಕೆಳಗೆ ಪಕ್ಷಾಘಾತವಾಗುತ್ತದೆ. ಬೆನ್ನುಹುರಿಯ ಮೇಲ್ಭಾಗದಲ್ಲಿ ವಿಕೃತಿಯಾದರೆ ಕೈಗಳಿಗೆ ಪಕ್ಷಾಘಾತವಾಗುತ್ತದೆ. ಮಸ್ತಿಷ್ಕದ ಮೇಲೆ ಹಾಗೂ ಬೆನ್ನುಹುರಿಯ ಮೇಲೆ ರವಿಯ ಆಧಿಪತ್ಯವಿರುವದು. ಇದಲ್ಲದೆ ಬ್ಲಡ್‌ಪ್ರೆಶರ್‌ನ್ನು (ರಕ್ತದ ಒತ್ತಡ) ನಿರ್ಲಕ್ಷಿಸಿದರೂ ಅರ್ಧಾಂಗವಾಯು, ಹೃದಯವಿಕಾರ ಉಂಟಾಗುತ್ತವೆ. ಬ್ಲಡ್‌ಪ್ರೆಶರ್ ಹಾಗೂ ಹೃದಯವಿಕಾರಗಳಿಗೂ ಸಹ ರವಿಯೇ ಕಾರಕನು. ಆದುದರಿಂದ

ಈ ರೋಗದ ಕಾರಕಗ್ರಹವೆಂದರೆ ರವಿಯು. ರವಿಯು ದೂಷಿತನಿರದೆ ಯಾರಿಗೂ ಪಕ್ಷಾಘಾತ-ಅರ್ಧಾಂಗವಾಯು ಆಗಲಾರದು.

ರವಿಯ ತರುವಾಯ ಶನಿಗ್ರಹವನ್ನೂ ಪರಿಶೀಲಿಸಬೇಕು. ಏಕೆಂದರೆ ಮಜ್ಜಾತಂತು ಕ್ಷೀಣವಾಗುವಿಕೆ, ದುರ್ಬಲವಾಗುವಿಕೆ, ಚಲನ-ವಲನ ಕ್ರಿಯೆಯಲ್ಲಿ ವಿಕೃತಿಯಾಗುವಿಕೆ ಇವೆಲ್ಲ ಲಕ್ಷಣಗಳು ವಾತದೋಷದವಿರುತ್ತವೆ. ಇದಲ್ಲದೆ ರೋಗದ ಹೆಸರೂ ಕೂಡ ವಾತಪ್ರಧಾನದೋಷವೆಂದು ದರ್ಶಿಸುತ್ತದೆ. ಮತ್ತು ಶೈತ್ಯದಿಂದ ಮುಖದ ಸ್ನಾಯುಗಳನ್ನು ನಿಷ್ಕ್ರಿಯವನ್ನಾಗಿ ಮಾಡಿ ಮುಖ ಪಕ್ಷಾಘಾತವಾಗುತ್ತದೆ. ಈ ಎಲ್ಲ ಗುಣಧರ್ಮಗಳು ಶನಿಗ್ರಹದಲ್ಲಿರುತ್ತವೆ. ಆದುದರಿಂದ ಶನಿಯು ಈ ರೋಗದ ಕಾರಕನು. ರವಿ-ಶನಿ ದೂಷಿತರಿರದೆ ಯಾರಿಗೂ ಈ ರೋಗ ಬರಲಾರದು.

**ಲಗ್ನ:—** ಮಸ್ತಿಷ್ಕದ ಮೇಲೆ ಮೇಷರಾಶಿಯ ಆಧಿಪತ್ಯವಿರುತ್ತದೆ. ಬೆನ್ನುಹುರಿಯ ಮೇಲೆ ಸಿಂಹರಾಶಿಯ ಆಧಿಪತ್ಯವಿರುತ್ತದೆ. ರಕ್ತದ ಪೂರೈಕೆಯ ಕೆಲಸ ಕುಂಭರಾಶಿಯ ಗುಣಧರ್ಮವಿರುತ್ತದೆ. ಮೇಷ, ಸಿಂಹ, ಕುಂಭ ಈ ರಾಶಿಗಳ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಮಸ್ತಿಷ್ಕದ ಸ್ಥಾನವಾದ ತನುಸ್ಥಾನವು ಬೆನ್ನುಹುರಿಯ ಸ್ಥಾನವಾದ ಚತುರ್ಥಸ್ಥಾನವು ಈ ರೋಗದ ಕಾರಕಸ್ಥಾನಗಳಿರುತ್ತವೆ. ಆದುದರಿಂದ ತನುಸ್ಥಾನ, ಚತುರ್ಥಸ್ಥಾನ, ಲಗ್ನೇಶ, ಚತುರ್ಥೇಶ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು.

ಲಗ್ನ-ಚತುರ್ಥದ ನಂತರ ಸಪ್ತಮ-ದಶಮಸ್ಥಾನಗಳನ್ನು ಪರಿಶೀಲಿಸಬೇಕು. ಏಕೆಂದರೆ ಸಪ್ತಮಸ್ಥಾನದಲ್ಲಿಯ ಗ್ರಹಗಳ ಪರಿಣಾಮವು ಲಗ್ನದ ಮೇಲೆಯೂ ದಶಮಸ್ಥಾನದಲ್ಲಿಯ ಗ್ರಹಗಳ ಪರಿಣಾಮವು ಚತುರ್ಥದ ಮೇಲೆಯೂ ಆಗುವದರಿಂದ, ಈ ರೋಗದ ವಿಷಯವಾಗಿ ಚತುರ್ಥ-ದಶಮಸ್ಥಾನಗಳನ್ನೂ ಪರಿಶೀಲಿಸಬೇಕು.

ಮೇಷ, ಸಿಂಹ, ಧನು ಈ ಲಗ್ನದವರಿಗೆ ಪಕ್ಷಾಘಾತವಾಗುವದು ಕಡಿಮೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಪಿತ್ತಪ್ರಕೃತಿಯ ರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯ ಜನರಿಗೂ ಬೌದ್ಧಿಕ ರಾಶಿಯವರಾದ ಮಿಥುನ, ತುಲಾ, ಕುಂಭ ಈ ರಾಶಿಯವರಿಗೂ ಈ ರೋಗದ ಭೀತಿ ಬಹಳ.

ಯೋಗಗಳು—

ಪಕ್ಷಾಘಾತದ ಬಗ್ಗೆ ಈ ಕೆಳಗಿನ ಯೋಗಗಳನ್ನು ಲಕ್ಷಿಸಬೇಕು.

೧) ದುರ್ಬಲ ರವಿಯು ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನಗಳಲ್ಲಿದ್ದರೆ ವೃದ್ಧಾಪ್ಯದಲ್ಲಿ,

೨) ಮೇಷ, ಸಿಂಹ, ಧನು ಈ ರಾಶಿಗಳ ಶನಿ-ಮಂಗಳ, ರವಿ-ಶನಿ, ಶನಿ-ರಾಹು, ರವಿ-ಮಂಗಳ, ಈ ಗ್ರಹಗಳ ಯುತಿಯೋಗವು ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನದಲ್ಲಿದ್ದರೆ,

೩) ಮೇಷರಾಶಿಯ ಗುರುವು ಲಗ್ನ, ಷಷ್ಠ, ಅಷ್ಟಮದಲ್ಲಿದ್ದರೆ ಮೆದುಳಿನಲ್ಲಿ ಬಾವು, ಶೋಥ, ತಲೆಗೆ ಚಕ್ರ (Congestion) ಮೊದಲಾದ ವಿಕಾರಗಳನ್ನು ತರುತ್ತಾನೆ.

೪) ಮೇಷರಾಶಿಯ ಶನಿಯು ಲಗ್ನ, ಚತುರ್ಥ, ಷಷ್ಠ, ಅಷ್ಟಮ, ದ್ವಾದಶದಲ್ಲಿದ್ದರೆ,

೫) ಮೇಷರಾಶಿಯ ರವಿಯು ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನಗಳಲ್ಲಿದ್ದರೆ ಮಸ್ತಿಷ್ಕಾವರಣದೋಷ (Meningitis) ವುಂಟಾಗುತ್ತದೆ. ಆದರೆ ಪಕ್ಷಾಘಾತ ಕೊಡಲಾರನು.

೬) ಸಿಂಹರಾಶಿಯ ರವಿಯು ಷಷ್ಠ, ಅಷ್ಟಮ, ದ್ವಾದಶದಲ್ಲಿದ್ದರೆ, ಬೆನ್ನು ಹುರಿಯಲ್ಲಿ ನೋವನ್ನುಂಟುಮಾಡುತ್ತಾನೆ. ಆದರೆ ಪಕ್ಷಾಘಾತ ಕೊಡಲಾರನು.

೭) ಧನುರಾಶಿಯ ರವಿಯು ಷಷ್ಠ, ಅಷ್ಟಮ, ದ್ವಾದಶಗಳಲ್ಲಿದ್ದರೆ,

## ೪೩. ಧನುರ್ವಾತ (Tetanus)

ಧನು ಎಂದರೆ ಬಿಲ್ಲು. ರೋಗಿಯು ಬಿಲ್ಲಿನ ಹಾಗೆ ಮಣಿಯುವದರಿಂದ ಈ ರೋಗಕ್ಕೆ ಧನುರ್ವಾತವೆಂದು ಹೆಸರು ಬಿದ್ದಿದೆ.

ಟಿಟ್ಯಾನಸ್ ಎಂಬ ಕ್ರಿಮಿಯು ಶರೀರದಲ್ಲಿ ಹೊಕ್ಕು ವಿಷ (ಟಾಕ್ಸಿನ್) ಮೈತುಂಬ ಹಬ್ಬಿ ಈ ರೋಗ ಆರಂಭವಾಗುವದೆಂದು ವೈದ್ಯಶಾಸ್ತ್ರಜ್ಞರ ಅಭಿಪ್ರಾಯ. ಈ ಕ್ರಿಮಿಗಳು ಶಗಣಿಯಲ್ಲಿರುವವು, ವಿಶೇಷವಾಗಿ ಕುದುರೆಯ ಲದ್ದಿಯಲ್ಲಿ ಇರುತ್ತವೆ. ಲದ್ದಿ-ಶಗಣಿಗಳು ಒಣಗಿದೊಡನೆ ಧೂಳಿಯೊಡನೆ ವಾತಾವರಣದಲ್ಲಿ ಸೇರಿಹೋಗುತ್ತವೆ. ದೇಹಕ್ಕೆ ಯಾವದೇ ಕಾರಣದಿಂದ ಗಾಯ, ಹೊಡೆತ, ಅಪಘಾತಾದಿಗಳಿಂದ ವ್ರಣವುಂಟಾಗಲು ಈ ಕ್ರಿಮಿಗಳು ಅಲ್ಲಿ ಸೇರಿ ರೋಗವನ್ನುಂಟುಮಾಡುತ್ತವೆ.

ಸಾಮಾನ್ಯವಾಗಿ ಈ ರೋಗದ ಉಪದ್ರವ ಕಬ್ಬಿಣ-ಉಕ್ಕುಗಳ ಕಾರಖಾನೆಗಳ ಕಾಮಗಾರರಲ್ಲಿಯೂ, ಮೋಟಾರ ಸಾಯಕಲ್ ದುರಸ್ತಗಾರರಲ್ಲಿಯೂ ಹಾಗೂ ಮಶಿನ್ ಶಾಪ, ವರ್ಕಶಾಪ, ಗ್ಯಾರೇಜದಲ್ಲಿಯ ಕಾಮಗಾರರಲ್ಲಿಯೂ ಈ ರೋಗದ ಉಪದ್ರವ ಬಹಳ. ಏಕೆಂದರೆ ತುಕ್ಕು (ಜಂಗು) ಹಿಡಿದ ಕಬ್ಬಿಣ ಚೂರುಗಳಿಂದ ಗಾಯಗಳಾಗಿ ಈ ರೋಗ ಬರುತ್ತದೆ. ಇಷ್ಟೊಂದು ಇವರ ಹಿನ್ನೆಲೆಯಲ್ಲಿ ಈ ರೋಗದ ವಿಷಯವಾಗಿ ಜ್ಯೋತಿಷ್ಯದ ಭಾಷ್ಯವೇನು ಎಂಬುದನ್ನು ನೋಡೋಣ.

**ಕಾರಕಗ್ರಹ :—** ಸ್ನಾಯುಗಳಲ್ಲಿ ವಿಕೃತಿಯಾಗುವದರಿಂದಲೇ ಈ ರೋಗ ಬರುವದರಿಂದ ಸ್ನಾಯುಗಳ ಮೇಲೆ ಆಧಿಪತ್ಯ ಹೊಂದಿದ ಮಂಗಳನು ದೂಷಿತನಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮಂಗಳನೇ ಈ ರೋಗದ ಕಾರಕಗ್ರಹನು.

ಮಂಗಳನ ತರುವಾಯ ಶನಿಯೂ ಈ ರೋಗದ ಕಾರಕನು. ಏಕೆಂದರೆ ಇದೊಂದು ವಾತಪ್ರಧಾನ ದೋಷದ ರೋಗವಿರುತ್ತದೆ.

**ಲಗ್ನ :—** ಸ್ನಾಯುಗಳ ಮೇಲೆ ಧನುರಾಶಿಯ ಪ್ರಭಾವವಿರುವದರಿಂದ ಜಾತಕದಲ್ಲಿ ಧನುರಾಶಿ ದೂಷಿತವಿರದೆ ಈ ರೋಗ ಬರಲಾರದು.

ಆದುದರಿಂದ ವೃಷಭ, ಕರ್ಕ, ಮಕರ ಈ ಲಗ್ನದವರಿಗೆ ಇದರ ಉಪದ್ರವ ಬಹಳ.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ಸ್ಥಾನವೇ ಈ ರೋಗದ ಕಾರಕಸ್ಥಾನವೆಂದು ಹೇಳಲು ಬಾರದು. ಏಕೆಂದರೆ ಕುತ್ತಿಗೆ, ಬೆನ್ನು, ನಡ, ಕೈ-ಕಾಲುಗಳಲ್ಲಿಯ ಐಚ್ಛಿಕ ಸ್ನಾಯುಗಳಲ್ಲಿಯ ವಿಕೃತಿಯಿಂದ ಈ ರೋಗ ಉಂಟಾಗುವದರಿಂದ ನಿರ್ದಿಷ್ಟ ಸ್ಥಾನವೇ ಈ ರೋಗದ ಕಾರಕ ಸ್ಥಾನವೆಂದು ಹೇಳಲು ಬಾರದು.

ರಾಶಿ :— ರಾಶಿಯ ದೃಷ್ಟಿಯಿಂದಲೂ ಸಹ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳಲುಬಾರದು. ಆದರೆ ಕೈ ಹಾಗೂ ಬೆನ್ನುಗಳ ಮೇಲಿರುವ ಸ್ನಾಯುಗಳ ಮೇಲೆ ಸಿಂಹರಾಶಿಯ ಪ್ರಭಾವವಿರುತ್ತದೆ. ಹೆಗಲಿನ ಸ್ನಾಯುಗಳ ಮೇಲೆ ಮಿಥುನ ರಾಶಿಯ ಆಧಿಪತ್ಯವಿರುತ್ತದೆ. ಗೋಣಿನಲ್ಲಿ ರುವ ಸ್ನಾಯುಗಳ ಮೇಲೆ ವೃಷಭರಾಶಿಯ ಆಧಿಪತ್ಯವಿರುತ್ತದೆ. ಕಾಲುಗಳ ಮೇಲಿರುವ ಸ್ನಾಯುಗಳ ಮೇಲೆ ಮೀನರಾಶಿಯ ಆಧಿಪತ್ಯವಿರುತ್ತದೆ. ಆದುದರಿಂದ ವೃಷಭ, ಮಿಥುನ, ಸಿಂಹ ಮೀನ ಈ ರಾಶಿಗಳು ಯಾರ ಜಾತಕ ದಲ್ಲಿ ದೂಷಿತವಿರುವವೋ ಅವರಿಗೆಲ್ಲ ಈ ರೋಗದ ಭೀತಿಯಿರುತ್ತದೆ.

## ೪೪. ಉನ್ಮಾದ (Insanity)
## (ಹುಚ್ಚು ಹಿಡಿಯುವಿಕೆ)

ಉನ್ಮಾದದಲ್ಲಿ ಅನೇಕ ಪ್ರಕಾರಗಳಿವೆ. ಸಾಮಾನ್ಯವಾಗಿ ಎಲ್ಲ ಉನ್ಮಾದ ಗಳಲ್ಲಿ ಭ್ರಮಿಷ್ಟತನ, ಬುದ್ಧಿಯನಾಶ, ಮನಸ್ಸಿನ ಚಂಚಲತೆ, ಮನಸ್ಸಿನ ಆಘಾತ, ಮನಸ್ಸಿಗೆ ಪರಿಣಾಮ, ವಿಚಾರಶಕ್ತಿಯಲ್ಲಿ ವಿಕೃತಿ ಉಂಟಾಗುತ್ತವೆ.

ಇದರಲ್ಲಿ ರೋಗಿಗಳು ಸುಂದಾಗಿ ಕೂಡ್ರುವರು. ಎಷ್ಟು ಮಾತನಾಡಿಸಿ ದರೂ ಮಾತನಾಡದಿರುವಿಕೆ, ಅಥವಾ ಬಹಳ ಮಾತನಾಡುವಿಕೆ, ಸುಮ್ಮ- ಸುಮ್ಮನೆ ನಗುವಿಕೆ, ಏನೂ ಕಾರಣವಿಲ್ಲದೆ ಅಳುವಿಕೆ, ಒದರುವಿಕೆ, ಚೀರುವಿಕೆ, ಓಡಾಡುವಿಕೆ, ಹಾಡುವಿಕೆ, ಬರಿಮೈಯಿಂದ ತಿರುಗಾಡುವಿಕೆ, ಅತಿ ನಿದ್ದೆ

ಅಥವಾ ಅನೇಕ ರಾತ್ರಿ ನಿದ್ರೆ ಮಾಡದೆ ಇರುವಿಕೆ, ವಾಂತಿಯಾಗುವಿಕೆ, ಜೊಲ್ಲು ಸುರಿಸುವಿಕೆ, ಬಹಳ ಆಹಾರ ಸೇವಿಸುವಿಕೆ, ಅಥವಾ ಅನೇಕ ದಿನ ಗಟ್ಟಲೆ ಆಹಾರ ಸೇವಿಸದೆ ಇರುವಿಕೆ, ಬಡಬಡಿಸುವಿಕೆ, ರೋಗಿಯ ಮುಖ-ಲಕ್ಷಣದಲ್ಲಿ ಕಾಂತಿ ಇಲ್ಲದಿರುವಿಕೆ, ಮುಖ ಕಪ್ಪಾಗುವಿಕೆ ಇವೇ ಮೊದಲಾದ ಲಕ್ಷಣ ಹಾಗೂ ಭಾವನೆಗಳಿರುವದರ ಮೂಲಕ ಇದೊಂದು ಮಾನಸಿಕ ವಿಕಾರ ವೆನ್ನಬಹುದು. ಆದುದರಿಂದ ಮಾನಸಿಕ ವಿಕಾರವನ್ನುಂಟುಮಾಡುವ ಗ್ರಹ, ಸ್ಥಾನ, ಲಗ್ನ, ರಾಶ್ಯಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :—** ಚಂದ್ರನು ಮನಸ್ಸಿನ ಕಾರಕಗ್ರಹ. ಜಾತಕದಲ್ಲಿ ಚಂದ್ರನು ದೂಷಿತನಿರದೇ ಯಾರಿಗೂ ಈ ವಿಕಾರವುಂಟಾಗಲಾರದು.

ಚಂದ್ರನ ತರುವಾಯ ಬುಧನೂ ಈ ವಿಕಾರದ ಕಾರಕನು. ಏಕೆಂದರೆ ಮಿದುಳಿನ ಮೇಲೆ ಹಾಗೂ ವಾಣಿಯ ಮೇಲೆ ಬುಧನ ಆಧಿಪತ್ಯವಿರುತ್ತದೆ. ಇದಲ್ಲದೆ ಈ ವಿಕಾರದಲ್ಲಿ ವಾತ, ಪಿತ್ತ, ಕಫ ತ್ರಿದೋಷಗಳೂ ದೂಷಿತವಿರು ತ್ತವೆ. ಬುಧನು ತ್ರಿದೋಷ ಪ್ರಧಾನ ಕಾರಕನು. ಆದುದರಿಂದ ಬುಧ-ಚಂದ್ರರು ದೂಷಿತರಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

**ಸ್ಥಾನ :—** ಇದೊಂದು ಮಾನಸಿಕ ವಿಕಾರವಿರುವದರಿಂದ ಮಾನಸಿಕ ಸ್ಥಾನಗಳನ್ನೇ ಪರಿಶೀಲಿಸಬೇಕು. ಯಾರೊಬ್ಬ ರೋಗಿಯ ಶರೀರ-ಪ್ರಕೃತಿ, ಸ್ವಭಾವ, ಶೀಲ, ಮನಸ್ಸು, ದೈಹಿಕ ಸೌಖ್ಯ ಮೊದಲಾದ ಗುಣಧರ್ಮಗಳು ಜಾತಕದ ತನುಸ್ಥಾನದಿಂದ ತಿಳಿಯುತ್ತವೆ. ಆದುದರಿಂದ ತನುಸ್ಥಾನ ಮತ್ತು ಲಗ್ನೇಶ ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

ತನುಸ್ಥಾನದ ನಂತರ ಚತುರ್ಥಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಚತುರ್ಥಸ್ಥಾನವು ಸುಖ-ದುಃಖಗಳ ಸಂಗತಿಗಳನ್ನು ವ್ಯಕ್ತಪಡಿಸುವ ಸ್ಥಾನವು. ಇದಲ್ಲದೆ ಇದು ಹೃದಯದ ಸ್ಥಾನವೂ ಇರುತ್ತದೆ. ಆತ್ಮ, ಬುದ್ಧಿ, ಮನಸ್ಸು, ಚೇತನಗಳಿಗೆ ಹೃದಯವೇ ಆಶ್ರಯವೆಂದು ಆಯುರ್ವೇದ ಶಾಸ್ತ್ರಜ್ಞರ ಅಭಿಪ್ರಾಯ. ಆದುದರಿಂದ ಚತುರ್ಥಸ್ಥಾನ, ಚತುರ್ಥೇಶ ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

**ಲಗ್ನ :** ಮಾನಸಿಕ ವಿಕಾರವನ್ನು ಉಂಟುಮಾಡುವ ರಾಶಿಗಳೆಂದರೆ

ಮಿಥುನ, ಕನ್ಯಾರಾಶಿಗಳು ಇರುತ್ತವೆ. ಈ ಎರಡೂ ರಾಶಿಗಳು ದೂಷಿತ ವಿರದೆ ಯಾರಿಗೂ ಈ ವಿಕಾರವುಂಟಾಗಲಾರದು. ಆದುದರಿಂದ ಮೇಷ, ಮಿಥುನ, ಕರ್ಕ, ಕನ್ಯಾ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರೇ ಹೆಚ್ಚಾಗಿ ಈ ರೋಗಗಳಿಂದ ಬಳಲುತ್ತಿರುವದು ಕಂಡುಬರುತ್ತದೆ.

**ರಾಶಿ:**— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಬೌದ್ಧಿಕ ರಾಶಿಯವ ರಾದ ಮಿಥುನ, ತುಲಾ, ಕುಂಭ ಈ ರಾಶಿಯವರಿಗೆ ಇದರ ವಿಕಾರ ತೀವ್ರ ವಾಗುವದು. ಈ ರಾಶಿಯ ನಂತರ ಚಿತ್ತಚಂಚಲ ಗುಣಧರ್ಮದ ರಾಶಿಯವ ರಾದ ಕರ್ಕ, ಮೀನ, ಕನ್ಯಾ ಈ ರಾಶಿಯವರಿಗೂ ಇದರ ಉಪದ್ರವ ಬಹಳ.

**ಯೋಗಗಳು :**

೧) ಚಂದ್ರ–ಬುಧ, ಬುಧ–ಮಂಗಳ, ಚಂದ್ರ–ಮಂಗಳ, ಚಂದ್ರ–ಶನಿ, ಇವರ ಯುತಿಯೋಗವು ಲಗ್ನ, ಚತುರ್ಥ, ದಶಮ, ಅಷ್ಟಮ, ದ್ವಿತೀಯ ಈ ಸ್ಥಾನಗಳಲ್ಲಿದ್ದರೆ,

೨) ಲಗ್ನ ಇಲ್ಲವೆ ಚತುರ್ಥದಲ್ಲಿ ಅನೇಕ ಗ್ರಹಗಳಿದ್ದರೆ ಅಥವಾ ಅನೇಕ ಗ್ರಹಗಳ ದೃಷ್ಟಿ ಈ ಸ್ಥಾನದ ಮೇಲೆ ಇದ್ದರೆ,

೩) ಚಂದ್ರ–ಮಂಗಳ, ಚಂದ್ರ–ಬುಧ, ಬುಧ–ಮಂಗಳ, ಶನಿ–ಚಂದ್ರ ಇವರ ಪ್ರತಿಯೋಗವು ಲಗ್ನ–ಸಪ್ತಮ ಅಥವಾ ಚತುರ್ಥ- ದಶಮದಲ್ಲಿದ್ದರೆ,

೪) ಚಂದ್ರ–ಬುಧರ ಇಲ್ಲವೆ ಚಂದ್ರ-ಮಂಗಳರ ಇಲ್ಲವೆ ಬುಧ-ಮಂಗಳರ ಯುತಿಯೋಗವು ಲಗ್ನ ದ್ವಿತೀಯದಲ್ಲಿ ಅಥವಾ ಈ ಗ್ರಹಗಳ ಪ್ರತಿಯೋಗವು ಲಗ್ನ–ಸಪ್ತಮ, ದ್ವಿತೀಯ–ಅಷ್ಟಮದಲ್ಲಿದ್ದರೆ ಬಹಳ ನಗುವರು, ಬಹಳ ಮಾತನಾಡುವರು.

೫) ಶನಿಯಿಂದ ದೃಷ್ಟಿಸಲ್ಪಟ್ಟ ಅಥವಾ ಯುತಿಯಾಗಲ್ಪಟ್ಟ ಚಂದ್ರನು ಲಗ್ನ–ಚತುರ್ಥ, ಅಷ್ಟಮ, ಷಷ್ಠ, ದ್ವಾದಶ ಈ ಸ್ಥಾನಗಳಲ್ಲಿದ್ದರೆ, ಆ ಜಾತಕನು ಉದಾಸೀನನಿರುವನು.

೬) ದೂಷಿತ ಚಂದ್ರ–ಬುಧರು ಮಂಗಳನೊಂದಿಗೆ ಅಶುಭಯೋಗ ವನ್ನುಂಟುಮಾಡುತ್ತಿದ್ದರೆ, ಆ ಜಾತಕನು ಚೀರಾಡುವದು, ಒದರಾಡುವದು ಮಾಡುತ್ತಾನೆ.

೭) ಕುಜನು ಸಪ್ತಮದಲ್ಲಿದ್ದು, ಗುರುವು ಲಗ್ನದಲ್ಲಿದ್ದರೆ ಚಿತ್ತ ಭ್ರಮಣವಾಗುವದು.

೮) ಕ್ಷೀಣ ಚಂದ್ರನು ಶನೀಶ್ವರಯುಕ್ತನಾಗಿ ದ್ವಾದಶದಲ್ಲಿದ್ದರೆ, ಮತಿಭ್ರಮಣವಾಗುತ್ತದೆ.

೯) ಲಗ್ನದಲ್ಲಿ ಶನಿಯಿದ್ದು, ಪಂಚಮ, ಸಪ್ತಮ, ದಶಮ ಸ್ಥಾನಗಳಲ್ಲಿ ಮಂಗಳನಿದ್ದರೆ ಉನ್ಮಾದವಾಗುತ್ತದೆ.

೧೦) ರವಿ-ಚಂದ್ರರ ಯುತಿಯು ಷಷ್ಠ-ಅಷ್ಟಮ ದ್ವಾದಶ, ಚತುರ್ಥದಲ್ಲಿದ್ದರೂ ಚಿತ್ತಚಂಚಲವಾಗುತ್ತದೆ.

೧೧) ಚಂದ್ರ-ಮಂಗಳ, ಚಂದ್ರ-ಶನಿ, ಶುಕ್ರ-ಮಂಗಳ, ಶುಕ್ರ-ಶನಿ, ಶುಕ್ರ-ಚಂದ್ರ ಇವರ ಯುತಿ ಯೋಗವು ಲಗ್ನ, ಪಂಚಮ, ಸಪ್ತಮ, ಅಷ್ಟಮ-ದ್ವಾದಶ ಈ ಸ್ಥಾನಗಳಲ್ಲಿದ್ದರೆ, ಸ್ತ್ರೀಯರ ವಿಷಯವಾಗಿ ಹುಚ್ಚು ಹಿಡಿಯುತ್ತದೆ.

೧೨) ಚಂದ್ರ-ಶನಿ, ಶುಕ್ರ-ಮಂಗಳ, ಚಂದ್ರ-ಮಂಗಳ, ಶುಕ್ರ-ಶನಿ ಇವರ ಪ್ರತಿಯೋಗವು ಲಗ್ನ-ಸಪ್ತಮ, ದ್ವಿತೀಯ-ಅಷ್ಟಮ, ಷಷ್ಠ-ವ್ಯಯ, ಲಾಭ-ಪಂಚಮ ಈ ಸ್ಥಾನಗಳಲ್ಲಿದ್ದರೂ ಸ್ತ್ರೀಯರ ವಿಷಯವಾಗಿ ಹುಚ್ಚು ಹಿಡಿಯುತ್ತದೆ.

## ೪೫. ಅಪಸ್ಮಾರ-ಮುಲರೋಗ (Epilepsy)

ಚಿಂತೆ ಮತ್ತು ಶೋಕ ಇತ್ಯಾದಿ ಮಾನಸಿಕ ಕಾರಣಗಳಿಂದ ಕುಪಿತವಾಗಿದ್ದಂಥ ದೋಷಗಳು ಹೃದಯದ ಶ್ರೋತಸ್ಸುಗಳಲ್ಲಿ ಅಥವಾ ಮನೋವಹ ಶ್ರೋತಸ್ಸುಗಳಲ್ಲಿ ಸೇರಿಕೊಂಡು ಸ್ಮರಣಶಕ್ತಿಯನ್ನು ಹಾಳುಮಾಡುತ್ತವೆ. ಇದಕ್ಕೇನೇ ಅಪಸ್ಮಾರ ಎನ್ನುವರೆಂದು ಮಾಧವರು ವ್ಯಾಖ್ಯೆ ಮಾಡಿದ್ದಾರೆ.

ಯಾವದೇ ರೋಗದಲ್ಲಿ ಸಾಮಾನ್ಯವಾಗಿ ಮೂರು ಪ್ರಕಾರಗಳಿವೆ— ದೈವಬಲ ಪ್ರವೃತ್ತಿ, ಆದಿಬಲ ಪ್ರವೃತ್ತಿ, ಉಭಯಜ ಪ್ರವೃತ್ತಿ. ಆದರೆ ಅಪಸ್ಮಾರವು ದೈವಬಲ ಪ್ರವೃತ್ತಿಯ ರೋಗವಿರುವದರಿಂದ ನಿವಾರಣೆಗೆ ಕಷ್ಟಸಾಧ್ಯವು.

**ಕಾರಕಗ್ರಹ :—** ಅಪಸ್ಮಾರದಲ್ಲಿ ಸ್ಮೃತಿ, ಬುದ್ಧಿ, ಮನಸ್ಸುಗಳ ಕಾರ್ಯ ನಾಶವಾಗುತ್ತದೆ. ಆದುದರಿಂದ ಇದು ಉನ್ಮಾದ-ಮೂರ್ಛಾಗಳಂತೆ ಮಾನಸಿಕ ರೋಗವಿರುವದರಿಂದ ಮಾನಸಿಕ ರೋಗವನ್ನುಂಟುಮಾಡುವ ಕಾರಕಗ್ರಹಗಳಾದ ಚಂದ್ರ, ಬುಧರೇ ಈ ರೋಗದ ಕಾರಕರು.

ಚಂದ್ರ-ಬುಧರ ನಂತರ ರವಿಯೂ ಈ ರೋಗದ ಕಾರಕನು. ಏಕೆಂದರೆ ಮೆದುಳಿಗೆ ರಕ್ತದ ಪೂರೈಕೆಯ ಕಾರ್ಯದಲ್ಲಿ ದೋಷವಿರುವದೇ ಈ ರೋಗದ ಪ್ರಧಾನ ಲಕ್ಷಣಗಳಲ್ಲಿ ಒಂದಾಗಿರುವದರಿಂದ ಮೆದುಳಿನ ಹಾಗೂ ರಕ್ತದ ಮೇಲೆ ಆಧಿಪತ್ಯ ಹೊಂದಿದ ರವಿಯೂ ಕಾರಕನಾಗುವನು.

ಚಂದ್ರ-ಬುಧ-ರವಿಗಳ ನಂತರ ಶನಿಯೂ ಈ ರೋಗದ ಕಾರಕನು. ಏಕೆಂದರೆ ಇದು ವಾತಪ್ರಧಾನ ದೋಷವಿದ್ದು, ಈ ರೋಗದಲ್ಲಿ ರೋಗಿಗಳ ಕಣ್ಣುಗಳು ವಕ್ರವಾಗಿರುವವು. ಬಾಯಿಂದ ಬುರುಗು ಬರುವದು, ನಾಲಿಗೆ ಹಾಗೂ ಶರೀರದ ಇತರ ಅವಯವಗಳಿಗೆ ಆಘಾತವುಂಟಾಗುವದು. ರೋಗ, ವುಂಟಾದಾಗ ರೋಗಿಯು ತೀವ್ರವೇ ಧೊಪ್ಪನೆ ನೆಲಕ್ಕೆ ಬೀಳುವದು— ಈ ಎಲ್ಲ ಗುಣಧರ್ಮಗಳು ಶನಿಯ ಗುಣಧರ್ಮಗಳಾಗಿರುತ್ತವೆ. ಆದ್ದರಿಂದ ಚಂದ್ರ, ಬುಧ, ರವಿ, ಶನಿ ಈ ನಾಲ್ಕೂ ಗ್ರಹಗಳು ದೂಷಿತರಿರದೆ ಯಾರಿಗೂ ಈ ರೋಗ ಉಂಟಾಗಲಾರದು.

**ಸ್ಥಾನ :—** ಮಾನಸಿಕ ರೋಗವನ್ನುಂಟುಮಾಡುವ ಸ್ಥಾನಗಳೆಂದರೆ ತನುಸ್ಥಾನ ಹಾಗೂ ಚತುರ್ಥಸ್ಥಾನಗಳಿರುತ್ತವೆ. ಈ ರೋಗದಲ್ಲಿ ಚತುರ್ಥ ಸ್ಥಾನವೇ ತನುಸ್ಥಾನಕ್ಕಿಂತ ಹೆಚ್ಚು ದೂಷಿತವಾಗಿರುತ್ತದೆ. ಆದುದರಿಂದ ಚತುರ್ಥಸ್ಥಾನವೇ ಕಾರಕಸ್ಥಾನವು. ಏಕೆಂದರೆ ಈ ರೋಗವುಂಟಾಗಲು ಮುಖ್ಯ ಕಾರಣವೆಂದರೆ ಮೆದುಳಿಗೆ ರಕ್ತದ ಪೂರೈಕೆಯು ಸರಿಯಾಗಿ ಆಗದಿರು ವಿಕೆ. ರಕ್ತದ ಪೂರೈಕೆ ಮಾಡುವ ಅವಯವವಾದ ಹೃದಯದ ಮೇಲೆ ಚತುರ್ಥ ಸ್ಥಾನದ ಆಧಿಪತ್ಯವಿರುತ್ತದೆ. ಹೃದಯದ ಕಾರ್ಯದಲ್ಲಿ ವಿಕೃತಿಯಾಗುವ ದೆಂದರೆ ಚತುರ್ಥಸ್ಥಾನವು ದೂಷಿತವಿರುತ್ತದೆ. ಆದುದರಿಂದ ಚತುರ್ಥ ಸ್ಥಾನವೇ ಈ ರೋಗದ ಕಾರಕಸ್ಥಾನವು.

ಆಯುರ್ವೇದ ಶಾಸ್ತ್ರಜ್ಞರಾದ ಚರಕಾಚಾರ್ಯರ ಅಭಿಮತವೂ ಕೂಡ ಹೀಗೆಯೇ ಇರುತ್ತದೆ— "ಪ್ರಕುಪಿತ ದೋಷಗಳು, ರಜೋಗುಣ ಹಾಗೂ

ತಮೋಗುಣಗಳಿಂದ ಅಭಿಭೂತ ಮನಸ್ಸುಳ್ಳ ಮನುಷ್ಯರ ಅಂತರಾತ್ಮನ ಅತಿಶಯ ಶ್ರೇಷ್ಠಸ್ಥಾನವಾದ ಹೃದಯವನ್ನು ಮತ್ತು ಇಂದ್ರಿಯ ಸ್ಥಾನಗಳನ್ನು ಆಶ್ರಯಿಸುತ್ತವೆ. ಅವುಗಳನ್ನು ಆಶ್ರಯಿಸಿದ ದೋಷಗಳು ಕ್ರೋಧಾದಿಗಳಿಂದ ಪ್ರೇರಿತವಾಗಿ ಹೃದಯ ಮತ್ತು ಇಂದ್ರಿಯ ಸ್ಥಾನಗಳನ್ನು ಕೂಡಲೇ ಪ್ರವೇಶಿಸುವವು. ಆಗ ಮನುಷ್ಯನ ಸ್ಮೃತ್ಯಾದಿಗಳು ನಾಶಹೊಂದಿದವನಾಗಿ ಫೇನೋದ್ವಮನಾದಿ ಭೀಭತ್ಸ ಚೇಷ್ಟೆಗಳನ್ನು ಮಾಡುತ್ತ ಅಜ್ಞಾನರೂಪೀ ಅಂಧಕಾರವನ್ನು ಪ್ರವೇಶಿಸುವನು."

ಚತುರ್ಥದ ನಂತರ ತನುಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಮೆದುಳಿಗೆ ರಕ್ತದ ಪೂರೈಕೆ ನಿಂತಕೂಡಲೆ ಬುದ್ಧಿನಾಶ, ಸ್ಮೃತಿನಾಶಗಳಿಂದಾಗಿ ಮಾನಸಿಕ ವಿಕಾರವುಂಟಾಗುತ್ತದೆ. ತನುಸ್ಥಾನವಿದು ಮೆದುಳಿನ ಸ್ಥಾನವಿರುತ್ತದೆ. ಆದುದರಿಂದ ತನುಸ್ಥಾನ, ಚತುರ್ಥಸ್ಥಾನ, ಲಗ್ನೇಶ, ಚತುರ್ಥೇಶ ದೂಷಿತರಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ಲಗ್ನ :—** ಶರೀರದ ಎಲ್ಲ ಅವಯವಗಳಿಗೆ ರಕ್ತದ ಪೂರೈಕೆ ಮಾಡುವ ಗುಣಧರ್ಮವು ಕುಂಭರಾಶಿಯದಿರುತ್ತವೆ. ಸಿಂಹರಾಶಿಯು ಹೃದಯದ ಮೇಲೆ ಆಧಿಪತ್ಯ ಹೊಂದಿದೆ. ಮೇಷರಾಶಿಯು ಮೆದುಳಿನ ಮೇಲೆ ಆಧಿಪತ್ಯ ಹೊಂದಿದೆ. ಈ ಮೂರೂ ರಾಶಿಗಳು ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮೇಷ, ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬರುತ್ತದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುವರೆಂದು ಹೇಳುವದು ಅಸಾಧ್ಯ.

## ೪೬. ಮೂರ್ಛೆ ಹಾಗೂ ಸನ್ಯಾಸ
## (Faint and Coma)

ಹಲವಾರು ವಿಕಾರಗಳಲ್ಲಿ ಮೂರ್ಛೆಯು ಒಂದು ಲಕ್ಷಣರೂಪವಾಗಿ ಬರುತ್ತದೆ. ಮೂರ್ಛೆಯ ತೀವ್ರಾವಸ್ಥೆಗೆ ಅರ್ಥಾತ್ ಘೋರ ಮೂರ್ಛೆಗೆ "ಸನ್ಯಾಸ"ವೆನ್ನಬಹುದು.

**ಕಾರಕಗ್ರಹ :—** ತೀವ್ರ ಜ್ವರ, ಅತಿಮದ್ಯಸೇವನೆ, ಅಪಘಾತ, (Accidents) ಭಯ, ದುಃಖ, ಶೋಕಾದಿ ಮಾನಸಿಕ ಆಘಾತಗಳಿಂದಲೂ ಉನ್ಮಾದ, ಮಧುಮೇಹ, ಜಲೋದರ, ಬಾಲಗ್ರಹ ಮೊದಲಾದ ರೋಗ ಗಳಲ್ಲಿಯೂ, ವಿಷ, ಸರ್ಪದಂಶ, ಮೊದಲಾದ ವಿಕಾರ ಹಾಗೂ ಕಾರಣ ಗಳಿಂದಲೂ ಮೂರ್ಛೆ, ಬವಳಿ, ಸನ್ಯಾಸಗಳು ಬರುವ ಸಂಭವವಿರುತ್ತದೆ. ಆದುದರಿಂದ ಇದೊಂದು ಪಿತ್ತದೋಷ (ಪಿತ್ತವೃದ್ಧಿ) ಪ್ರಧಾನವಿರುತ್ತದೆ. ರವಿ–ಮಂಗಳರೇ ಈ ರೋಗದ ಕಾರಕರು.

ಮಾನಸಿಕ ಆಘಾತ, ಶೋಕ-ದುಃಖಾದಿಗಳಿಂದಲೂ ಮೂರ್ಛಾವಸ್ಥೆ ಬರುವದರಿಂದ ಮನಸ್ಸಿನ ಅಧಿಪತಿಯಾದ ಚಂದ್ರನೂ ಈ ರೋಗದ ಕಾರಕನು.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತನುಸ್ಥಾನವೇ ಈ ವಿಕಾರದ ಕಾರಕವು. ಆದುದರಿಂದ ತನುಸ್ಥಾನ ಹಾಗೂ ಲಗ್ನೇಶ ದೂಷಿತ ರಿರದೆ ಯಾರಿಗ ು ಈ ವಿಕಾರವುಂಟಾಗಲಾರದು.

**ಲಗ್ನ :—** ನಿರ್ದಿಷ್ಟವಾದ ಲಗ್ನದವರೇ ಈ ರೋಗದಿಂದ ಬಳಲುವರು ಎಂದು ಹೇಳಲು ಬಾರದು.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಎರಡು ವರ್ಗಗಳ ನ್ನಾಗಿ ಮಾಡಬಹುದು. ೧) ಮೇಷ, ಸಿಂಹ, ಧನು ಈ ರಾಶಿಯವರಿಗೆ ಪಿತ್ತವೃದ್ಧಿಯಾಗಿ ಈ ವಿಕಾರವುಂಟಾಗುತ್ತದೆ. ೨) ವೃಷಭ, ಮಿಥುನ, ಕರ್ಕ, ಕನ್ಯಾ, ಮೀನ ಈ ರಾಶಿಯವರಿಗೆ ಶೋಕ, ಭಯ, ದುಃಖ, ಸಂತಾಪಾದಿ ಮಾನಸಿಕ ಆಘಾತಗಳಿಂದ ಈ ವಿಕಾರವುಂಟಾಗುತ್ತದೆ.

**ಯೋಗಗಳು :**

೧) ಶನಿ, ರಾಹುಗಳಿಂದ ದುಷ್ಟ ಇಲ್ಲವೆ ಯುತಿಯಾದ ಚಂದ್ರನು ಲಗ್ನ, ಚತುರ್ಥ, ಷಷ್ಠ, ಅಷ್ಟಮ, ದ್ವಾದಶದಲ್ಲಿದ್ದರೆ,

೨) ಮೇಷ, ಸಿಂಹ, ಧನು, ಲಗ್ನವಿದ್ದು, ಲಗ್ನದಲ್ಲಿ ರವಿ, ಮಂಗಳ ರಿದ್ದು, ಚಂದ್ರನು ಸ್ಥಿರರಾಶಿಯಲ್ಲಿದ್ದರೆ ಈ ವಿಕಾರವುಂಟಾಗುತ್ತದೆ.

## ೪೭. ಅಲರ್ಜಿ (Allergy)

ಈ ರೋಗವು ಬಹಳ ವಿಚಿತ್ರವಿರುತ್ತದೆ. ಇದಕ್ಕೆ ರೋಗವೆನ್ನದೆ ವಿಕಾರವೆನ್ನಬಹುದು. ಕೆಲವೊಬ್ಬರ ದೇಹಕ್ಕೆ ಕೆಲವೊಂದು ಪದಾರ್ಥಗಳು ಒಗ್ಗುವದಿಲ್ಲ (ಅಸಾತ್ಮೇಂದ್ರಿಯ). ಆಯಾ ಪದಾರ್ಥಗಳು ದೇಹಕ್ಕೆ ತಗಲಿದೊಡನೆ ಉಬ್ಬಸ ಬರುತ್ತದೆ. ಇದರಂತೆ ಕೆಲವರಿಗೆ ಕೆಲವೊಂದು ಹೂವಿನ, ವಸ್ತುವಿನ ಗಂಧ-ವಾಸನೆ ಕೂಡ ಒಗ್ಗುವದಿಲ್ಲ. ಆಯಾ ಒಗ್ಗದ ಪದಾರ್ಥಗಳು ದೃಷ್ಟಿಗೆ ಬೀಳುವದಾಗಲಿ, ವಾಸನೆ ಬರುವದಾಗಲಿ, ಮೈಗೆ ತಗಲುವದಾಗಲಿ, ಈ ಕ್ರಿಯೆಗಳ ಮೂಲಕ ಉಬ್ಬಸ ಬಂದು ದಮ್ಮು ಬರುತ್ತದೆ. ಮತ್ತೆ ಕೆಲವರಿಗೆ ಇಸಬು ಮೊದಲಾದ ವಿಕಾರಗಳೂ ಉಂಟಾಗುತ್ತವೆ. ಈ ತರಹದ ವಿಕಾರಕ್ಕೆ "ಅಲರ್ಜಿ" ಎನ್ನುವರು.

**ಕಾರಕಗ್ರಹ:—** ಮಾನಸಿಕ ವಿಕೃತಿಯೇ ಈ ರೋಗದ ಕಾರಣವಿರುವದರಿಂದ ಬುಧ-ಚಂದ್ರರೇ ಈ ರೋಗದ ಕಾರಕರು. ಬುಧ-ಚಂದ್ರರು ದೂಷಿತರಿರದೆ ಯಾರಿಗೂ ಈ ರೋಗ ಬರಲಾರದು.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತನುಸ್ಥಾನವೇ ಈ ರೋಗದ ಕಾರಕಸ್ಥಾನ. ಏಕೆಂದರೆ ಜಾತಕನ ಮನೋಧರ್ಮ, ಮಾನಸಿಕ ಸ್ಥಿತಿ, ಸ್ವಭಾವಗಳೇ ಈ ರೋಗದ ಲಕ್ಷಣವಿರುವದರಿಂದ ತನುಸ್ಥಾನ ಹಾಗೂ ಲಗ್ನೇಶ ದೂಷಿತರಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

**ಕಾರಕಗ್ರಹ :—** ನಿರ್ದಿಷ್ಟವಾದ ಲಗ್ನದವರೇ ಈ ವಿಕಾರದಿಂದ ಬಳಲುವರೆಂದು ಹೇಳುವದು ಕಠಿಣ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಹೆಚ್ಚಾಗಿ ಈ ವಿಕಾರದಿಂದ ಬಳಲುತ್ತಿರುವದು ಕಂಡುಬಂದಿದೆ.

**ಯೋಗಗಳು—**

೧) ಲಗ್ನೇಶ ನಿರ್ಬಲನಿದ್ದರೆ,
೨) ತನುಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ,

೩) ತನುಸ್ಥಾನವನ್ನು ಅನೇಕ ಗ್ರಹಗಳು ನೋಡುತ್ತಿದ್ದರೆ,

೪) ಚಂದ್ರನು ದುರ್ಬಲನಾಗಿ ಲಗ್ನ, ಚತುರ್ಥ, ಷಷ್ಠ, ಅಷ್ಟಮ, ದ್ವಾದಶ ಸ್ಥಾನಗಳಲ್ಲಿದ್ದರೆ,

೫) ದುರ್ಬಲ ಚಂದ್ರನಿಗೆ ಶನಿ, ರಾಹುಗಳ ದೃಷ್ಟಿಯಿದ್ದರೆ ಅಥವಾ ಶನಿ-ಚಂದ್ರ, ಚಂದ್ರ-ರಾಹು ಇವರ ಯುತಿಯೋಗವು ಲಗ್ನ, ಚತುರ್ಥ, ಷಷ್ಠ, ಅಷ್ಟಮ, ವ್ಯಯದಲ್ಲಿದ್ದರೆ ಈ ಐದು ಯೋಗಗಳಲ್ಲಿ ಜನಿಸಿದ ಜಾತಕನು ಈ ವಿಕಾರದಿಂದ ಬಳಲುವದು ಕಂಡುಬಂದಿದೆ.

## ೪೮. ಅಪಚನ (Indigestion), ಅಗ್ನಿಮಾಂದ್ಯ (Dyspepsia), ಹೊಟ್ಟೆನೋವು ಹಾಗೂ ಹೊಟ್ಟೆಯಲ್ಲಿ ವಾತ ತುಂಬುವಿಕೆ ಮತ್ತು ಕಮುಂಡೇಗ ಮೇಲಿಂದ ಮೇಲೆ ಬರುವಿಕೆ

**ಕಾರಕಲಗ್ನ** :— ಈ ಮೇಲಿನ ಕಿರುಕುಳ ಉಪದ್ರವಗಳಿಗೆ ಕಾರಕ ರಾಶಿಗಳೆಂದರೆ ಕರ್ಕ ಹಾಗೂ ಕನ್ಯಾ ರಾಶಿಗಳಿರುತ್ತವೆ. ಕರ್ಕ ಹಾಗೂ ಕನ್ಯಾ ಈ ಎರಡೂ ರಾಶಿಗಳು ದೂಷಿತವಿರದೆ ಯಾರಿಗೂ ಈ ಉಪದ್ರವ ಬರಲಾರದು. ಏಕೆಂದರೆ ಕರ್ಕರಾಶಿಯ ಕ್ರಿಯೆಯೆಂದರೆ ಹೊಟ್ಟೆಯೊಳಗಿನ ಆಮರಸದ ಮೇಲೆ ಮತ್ತು ಆಮಾಶಯದ ಮೇಲೆ ಇರುತ್ತದೆ. ಕನ್ಯಾ ರಾಶಿಯಂತೂ ಜಠರಾಗ್ನಿಯ ರಾಶಿಯಿರುತ್ತದೆ. ಆದುದರಿಂದ ಮೇಷ, ತುಲಾ, ಧನು, ಕುಂಭ ಈ ಲಗ್ನದವರೇ ಮೇಲಿನ ವಿಕಾರದಿಂದ ಹೆಚ್ಚಾಗಿ ಬಳಲುತ್ತಿರುವದು ಕಂಡುಬಂದಿದೆ.

**ಸ್ಥಾನ** :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ಪಂಚಮ, ಷಷ್ಠ ಈ ಸ್ಥಾನಗಳನ್ನು ಪರಿಶೀಲಿಸಬೇಕು. ಏಕೆಂದರೆ ತನುಸ್ಥಾನವಿದು ಜಾತಕನ ನೈಸರ್ಗಿಕ ಪ್ರಕೃತಿಯ ಗುಣಧರ್ಮವನ್ನೂ ಪ್ರತೀಕಾರ ಶಕ್ತಿಯನ್ನೂ ದರ್ಶಿಸುತ್ತದೆ. ಪಂಚಮಸ್ಥಾನವು ಆಮಾಶಯ ಸ್ಥಾನವೂ, ಉದರದ ಸ್ಥಾನವೂ ಇರುತ್ತದೆ. ಅಗ್ನಿಮಾಂದ್ಯ, ಅಪಚನ ರೋಗಗಳ ಕಾರಕಸ್ಥಾನವೆಂದರೆ ಷಷ್ಠಮಸ್ಥಾನವಿರುತ್ತದೆ.

**ಕಾರಕಗ್ರಹ** — ಅಗ್ನಿಮಾಂದ್ಯ, ಅಪಚನವಾಗುವಿಕೆ, ದ್ರವಧಾತು ವೃದ್ಧಿಯಾಗುವಿಕೆ ಇವು ಕಫದೋಷದ ಲಕ್ಷಣ. ಆದುದರಿಂದ ಗುರು-ಚಂದ್ರರೇ

ಈ ರೋಗದ ಕಾರಕರು. ಗುರು-ಚಂದ್ರರ ತರುವಾಯ ಶನಿಯನ್ನೂ ಪರಿಶೀಲಿಸಬೇಕು. ಏಕೆಂದರೆ ಹೊಟ್ಟೆಶೂಲೆ, ಹೊಟ್ಟೆಯಲ್ಲಿ ವಾತ ತುಂಬುವಿಕೆ, ಕಮರಡೇಗು ಇವು ವಾತಪ್ರಧಾನ ದೋಷಗಳಿರುವದರಿಂದ ಶನಿಯು ಈ ರೋಗದ ಕಾರಕನು.

ಯೋಗಗಳು—

೧) ರವಿಯು ಕರ್ಕರಾಶಿಯಲ್ಲಿದ್ದರೆ ಅಥವಾ ಮೀನರಾಶಿಯಲ್ಲಿದ್ದರೆ ಅಗ್ನಿಮಾಂದ್ಯವನ್ನು ಕೊಡುವನು.

೨) ರವಿಯು ಕನ್ಯಾರಾಶಿಯಲ್ಲಿದ್ದರೆ ಮಲಬದ್ಧತೆ ನಿರ್ಮಾಣ ಮಾಡುವನು.

೩) ಚಂದ್ರನು ಕರ್ಕರಾಶಿಯಲ್ಲಿದ್ದು, ಶನಿಯಿಂದ ನೋಡಲ್ಪಡುತ್ತಿದ್ದರೆ ಹೊಟ್ಟೆಯಲ್ಲಿ ವಾತ ತುಂಬುವದು.

೪) ಚಂದ್ರನು ಕರ್ಕರಾಶಿಯವನಾಗಿ ಲಗ್ನ ಷಷ್ಠದಲ್ಲಿದ್ದರೆ ಅಗ್ನಿಮಾಂದ್ಯ, ಅಪಚನವನ್ನು ಕೊಡುವನು.

೫) ಮಂಗಳನು ಕರ್ಕರಾಶಿಯವನಾದರೆ ಭಯಂಕರ ಹೊಟ್ಟೆಶೂಲೆ ಕೊಡುವನು.

೬) ಕರ್ಕರಾಶಿಯ ಮಂಗಳನು ಲಗ್ನ, ಷಷ್ಠದಲ್ಲಿದ್ದರೆ ಅಗ್ನಿಮಾಂದ್ಯ, ಅಪಚನ ಮಾಡುವನು.

೭) ದುರ್ಬಲ ಗುರುವು ಷಷ್ಠ, ಅಷ್ಟಮದಲ್ಲಿದ್ದರೆ ಅಗ್ನಿಮಾಂದ್ಯ, ಅಪಚನ ಕೊಡುವನು.

೮) ಕರ್ಕರಾಶಿಯ ಬುಧನು ಪಂಚಮ, ಷಷ್ಠದಲ್ಲಿದ್ದರೆ ಹೊಟ್ಟೆಯಲ್ಲಿ ಮುರಿಯುವಿಕೆ ಉಂಟಾಗುತ್ತದೆ.

೯) ಗುರುವು ಕನ್ಯಾರಾಶಿಯವನಿದ್ದರೆ ಯಕೃತ್ತಿನ ದೋಷವಿರುತ್ತದೆ. ಹಾಗೂ ಢೇಕರಿಕೆಯನ್ನು ಬಹಳ ಕೊಡುವನು.

೧೦) ಕರ್ಕರಾಶಿಯಲ್ಲಿ ಶುಕ್ರನಿದ್ದರೆ ಹೊಟ್ಟೆಯಲ್ಲಿ ಹಾಗೂ ಬಾಯಿಯಲ್ಲಿ ಮಳಮಳ ಆಗುತ್ತದೆ.

೧೧) ಕರ್ಕ, ಕನ್ಯಾ ರಾಶಿಗಳ ಪಂಚಮ, ಷಷ್ಠದಲ್ಲಿ ಶನಿ ಇದ್ದರೆ ಹೊಟ್ಟೆಶೂಲೆ, ಹೊಟ್ಟೆನೋವು, ಅಗ್ನಿಮಾಂದ್ಯ ಅಪಚನಗಳಾಗುತ್ತವೆ.

## ೪೯. ಅತಿಸಾರ ( Diarrhœa )
## ಡೈರಿಯಾ

ಇದು ಸ್ವತಂತ್ರ ರೋಗವಾಗಿಯೂ ಇಲ್ಲವೆ ಬೇರೆ ಕೆಲ ರೋಗಗಳಲ್ಲಿ ಉಪದ್ರವರೂಪವಾಗಿಯೂ ಬರುತ್ತದೆ. ಈ ವಿಕಾರದಲ್ಲಿ ನೀರಿನಂತೆ ದೊಡ್ಡ ಪ್ರಮಾಣದಲ್ಲಿ ಜುಲಾಬು ಆಗುವದೇ ಪ್ರಧಾನ ಲಕ್ಷಣ.

**ಕಾರಕಸ್ಥಾನ :–** ಇದೊಂದು ಪಚನಸಂಸ್ಥೆಯಲ್ಲಿಯ ವಿಕಾರವಿರುವದರಿಂದಲೂ ಅಗ್ನಿಮಾಂದ್ಯ ಪ್ರಮುಖ ಕಾರಣವಿರುವದರಿಂದಲೂ ಸಣ್ಣ ಕರುಳಿನಲ್ಲಿಯೇ ದೋಷವಿರುವದರಿಂದಲೂ ಷಷ್ಠಸ್ಥಾನವೇ ಮೂಲ ಮತ್ತು ಮುಖ್ಯ ಕಾರಕಸ್ಥಾನವಿರುತ್ತದೆ. ಷಷ್ಠಸ್ಥಾನ ಹಾಗೂ ಷಷ್ಠೇಶ ದೂಷಿತರಿರದೆ ಯಾರಿಗೂ ಅತಿಸಾರದಿಂದ ತೊಂದರೆಯಾಗದು.

ಷಷ್ಠದ ನಂತರ ಪಂಚಮಾಷ್ಟಮ ಸ್ಥಾನಗಳನ್ನೂ ಪರಿಶೀಲಿಸಬೇಕು. ಏಕೆಂದರೆ ಈ ರೋಗದಲ್ಲಿ ಹೊಟ್ಟೆನೋವು, ಹೊಟ್ಟೆಯಲ್ಲಿ ಗುಡುರ್-ಗುಡುರ್ ಎಂಬ ಶಬ್ದವಾಗುವಿಕೆ ಮೊದಲಾದ ಲಕ್ಷಣವಿರುತ್ತವೆ. ಇವು ಪಂಚಮ ಸ್ಥಾನದ ಭಾವಗಳು.

ದೊಡ್ಡಕರುಳು (ಪಕ್ವಾಶಯ) ದೂಷಿತವಿರದೆ ಮೇಲಿಂದ ಮೇಲೆ ಜುಲಾಬು ಆಗಲಾರದು. ಅಷ್ಟಮಸ್ಥಾನವು ದೊಡ್ಡಕರುಳಿನ ಸ್ಥಾನವಿರುವದರಿಂದ ಅಷ್ಟಮಸ್ಥಾನವನ್ನೂ ಪರಿಶೀಲಿಸಬೇಕು.

**ಕಾರಕಗ್ರಹ :—** ಅಗ್ನಿಮಾಂದ್ಯವಾಗುವಿಕೆ, ದ್ರವಧಾತು (ಆಪ್-ಧಾತು) ವೃದ್ಧಿಯಾಗುವಿಕೆ ಇವು ಕಫದೋಷದ ಲಕ್ಷಣವಿರುತ್ತವೆ. ಆದುದರಿಂದ ಗುರು-ಚಂದ್ರರೇ ಈ ರೋಗದ ಕಾರಕರು. ಏಕೆಂದರೆ ಗುರುಗ್ರಹವು ದೂಷಿತವಿದ್ದರೆ ಅಗ್ನಿಮಾಂದ್ಯ, ಅಪಚನ ನಿರ್ಮಾಣವಾಗುತ್ತದೆ. ಇದಲ್ಲದೆ ಗುರುವು ಕಫಕಾರಕನು; ಆಪ್‌ವೃದ್ಧಿಯಾಗುವಿಕೆ ಇದು ಚಂದ್ರಗ್ರಹದ ಲಕ್ಷಣವು.

ಗುರು-ಚಂದ್ರರ ತರುವಾಯ ಷಷ್ಠೇಶ ಮತ್ತು ಶನಿ ಇವರನ್ನೂ ಪರಿಶೀಲಿಸಬೇಕು. ಏಕೆಂದರೆ ಅಗ್ನಿಮಾಂದ್ಯವಾಗುವಿಕೆ ಈ ಕ್ರಿಯೆಯೂ ಸಣ್ಣ ಕರುಳು ದೂಷಿತವಿರದೆ ಆಗಲಾರದು. ಮೇಲಿಂದ ಮೇಲೆ ಭೇದಿಯಾಗುವಿಕೆ

ಇದು ದೊಡ್ಡ ಕರುಳು ದೂಷಿತವಿರದೆ ಆಗಲಾರದು. ದೊಡ್ಡ ಕರುಳಿನ ಮೇಲೆ ಶನಿಯ ಆಧಿಪತ್ಯವಿರುವದು.

**ಕಾರಕಲಗ್ನ :—** ಅಗ್ನಿಮಾಂದ್ಯ ಹಾಗೂ ನೀರಿನಂತೆ ಮೇಲಿಂದ ಮೇಲೆ ಭೇದಿಯಾಗುವಿಕೆಯೇ ಪ್ರಧಾನ ಲಕ್ಷಣವಿರುವದರಿಂದ ಕಫದೋಷವೇ ಪ್ರಧಾನದೋಷವಿರುತ್ತದೆ.

ಜಲರಾಶಿಗಳು ಅಗ್ನಿಮಾಂದ್ಯ ಕ್ರಿಯೆಯನ್ನು ವರ್ಧಿಸುತ್ತವೆ. ಆದುದರಿಂದ ಈ ರೋಗದಲ್ಲಿ ಜಲರಾಶಿಗಳೇ ಹೆಚ್ಚು ದೂಷಿತವಿರುತ್ತವೆ. ಅದರಲ್ಲಿಯೂ ಕರ್ಕರಾಶಿ ದೂಷಿತವಿರದೆ ಯಾರಿಗೂ ಅತಿಸಾರದಿಂದ ತೊಂದರೆಯಾಗಲಾರದು. ಆದುದರಿಂದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ಲಗ್ನದವರೇ ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರಿಗೆ ಅತಿಸಾರ ಬರುತ್ತದೆ ಎಂದು ಹೇಳಲು ಬರುವದಿಲ್ಲ. ಯಾರ ಜಾತಕದಲ್ಲಿ ಅಗ್ನಿಮಾಂದ್ಯವಿರುವದೋ ಅಥವಾ ಅಪ್‌ಧಾತು, ವೃದ್ಧಿಕಾರಕ ರಾಶಿಗಳಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಗಳು ದೂಷಿತವಿರುವವೋ ಅಂಥವರಿಗೂ ಸಣ್ಣ ಕರುಳಿನ ರಾಶಿಯಾದ ಕನ್ಯಾರಾಶಿಯು ಯಾರ ಜಾತಕದಲ್ಲಿ ದೂಷಿತವಿರುವದೋ ಅಂಥವರು ಈ ರೋಗದಿಂದ ಹೆಚ್ಚಾಗಿ ಬಳಲುತ್ತಿರುವದು ಕಂಡುಬರುತ್ತದೆ.

**ಯೋಗಗಳು :—**

೧) ಕರ್ಕರಾಶಿಯು ಆಮರಸ ಹಾಗೂ ಅನ್ನದ ಪರಿಪಾಕಮಾಡುವ ಕ್ರಿಯೆಯದು ಇರುತ್ತದೆ. ಆದುದರಿಂದ ಕರ್ಕರಾಶಿಯಲ್ಲಿ ಶನಿ ಇಲ್ಲವೆ ಮಂಗಳರಿದ್ದು, ಲಗ್ನ, ಷಷ್ಠ, ಅಷ್ಟಮ, ದ್ವಾದಶ ಈ ಯಾವದೊಂದು ಸ್ಥಾನದಲ್ಲಿದ್ದ ಜಾತಕನಿಗೆ ಅಪಚನ, ಅಗ್ನಿಮಾಂದ್ಯ, ಹೊಟ್ಟೆನೋವು, ಅತಿಸಾರ ಈ ರೋಗಗಳು ಹೆಚ್ಚು.

೨) ಗುರು, ಚಂದ್ರ, ಶುಕ್ರ, ಶನಿ ಈ ಗ್ರಹಗಳು ದೂಷಿತವಿದ್ದರೆ ಅಗ್ನಿಮಾಂದ್ಯವನ್ನುಂಟುಮಾಡುತ್ತವೆ.

೩) ಕರ್ಕರಾಶಿಯ ಗುರು ಇಲ್ಲವೆ ಶುಕ್ರರು ಷಷ್ಠ, ಅಷ್ಟಮ, ದ್ವಾದಶ ಈ ಯಾವದೊಂದು ಸ್ಥಾನದಲ್ಲಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟ ಜಾತಕನ ಶ್ವೇತದ್ರವ್ಯ, ಮಜ್ಜಾ, ಮೇಹ (Albuminuria) ಮೊದಲಾದವು ಮೂತ್ರ ಮಾರ್ಗದಿಂದ ಹೋಗುತ್ತವೆ.

## ೫೦. ಸಂಗ್ರಹಣಿ—ಆಮಾಂಶ (Dysentery) (ಡಿಶೆಂಟರಿ)

ಈ ರೋಗವಾದರೂ ಸ್ವತಂತ್ರವಾಗಿಯೂ ಇಲ್ಲವೆ— ಉಪದ್ರವ ಲಕ್ಷಣ ರೂಪವಾಗಿಯೂ ಬರುತ್ತದೆ. ಮಳೆಗಾಲದ ಪ್ರಾರಂಭದಲ್ಲಿ ಇದರ ಉಪದ್ರವ ಬಹಳ.

**ಕಾರಕಸ್ಥಾನ:** ಈ ವಿಕಾರದಲ್ಲಿ ಆಮ ಅಥವಾ ರಕ್ತ–ಆಮ ಕೂಡಿ ಮೇಲಿಂದ ಮೇಲೆ ಭೇದಿಯಾಗುವಿಕೆ, ತಿಣಕುವಿಕೆ ಇವೇ ಪ್ರಧಾನ ಲಕ್ಷಣವಿರುವದರಿಂದ ದೊಡ್ಡ ಕರುಳೇ (ಸ್ಥೂಲಾಂತರ) ಪ್ರಧಾನ ದೂಷಿತ ಅವಯವವಿರುತ್ತದೆ. ಆದುದರಿಂದ ಪಕ್ವಾಶಯ, ಗುದ, ದೊಡ್ಡ ಕರುಳು ಈ ಅವಯವಗಳ ಸ್ಥಾನವಾದ ಅಷ್ಟಮಸ್ಥಾನವೇ ಕಾರಕಸ್ಥಾನವಿರುತ್ತದೆ. ಅಷ್ಟಮಸ್ಥಾನ, ಅಷ್ಟಮೇಶ ದೂಷಿತರಿರದೆ ಯಾರಿಗೂ ಈ ರೋಗ ಬರಲಾರದು.

ಅಷ್ಟಮಸ್ಥಾನದ ನಂತರ ಷಷ್ಠ–ಪಂಚಮಸ್ಥಾನಗಳನ್ನೂ ಪರಿಶೀಲಿಸಬೇಕು. ಏಕೆಂದರೆ ಹೊಟ್ಟೆ ಮುರಿಯುವಿಕೆ ಇದು ಪಂಚಮಸ್ಥಾನದ ಭಾವವು. ಅಗ್ನಿಮಾಂದ್ಯ, ಅಪಚನಗಳಾಗುವದು ಷಷ್ಠಸ್ಥಾನದ ಕಾರಣದಿಂದ. ಅನ್ನದ ಪರಿಪಾಕ ಸರಿಯಾಗಿ ಆಗದೆ ಇರುವದೇ ಅಪಚನದ ಕಾರಣವು. ಷಷ್ಠೇಶ, ಷಷ್ಠ ಸ್ಥಾನಗಳು ದೂಷಿತರಿರದೆ ಅಗ್ನಿಮಾಂದ್ಯ, ಅಪಚನಗಳಾಗದು. ಇದಲ್ಲದೆ ಅತಿಸಾರವನ್ನು ಅಲಕ್ಷ್ಯ ಮಾಡುವದರಿಂದ ಆಮಾಂಶ ಉಂಟಾಗುವದೆಂದು ಆಯುರ್ವೇದ ಶಾಸ್ತ್ರಜ್ಞರ ಅಭಿಪ್ರಾಯ. ಆದುದರಿಂದ ಈ ಸ್ಥಾನಗಳನ್ನೂ ಪರಿಶೀಲಿಸಬೇಕಾಗುತ್ತದೆ.

**ಕಾರಕಗ್ರಹ:** ಹೊಟ್ಟೆಶೂಲೆ, ಹೊಟ್ಟೆ ಮುರಿಯುವಿಕೆ, ತಿಣುಕುವಿಕೆ (ಪ್ರವಾಹಿಕಾ) ಮೇಲಿಂದ ಮೇಲೆ ಭೇದಿಯಾಗುವಿಕೆ, ಕೈ-ಕಾಲು ಬಳಬಳ

ಅನ್ನುವಿಕೆ ಇವೇ ರೋಗದ ಪ್ರಧಾನ ಲಕ್ಷಣ ಹಾಗೂ ಭಾವಗಳಿರುವ ಮೂಲಕ ವಾತದೋಷವೇ ಪ್ರಧಾನವಿರುತ್ತದೆ. ಆದುದರಿಂದ ವಾತದೋಷದ ಕಾರಕನೂ ದೊಡ್ಡ ಕರುಳಿನ ಅಧಿಪತಿಯೂ ಆದ ಶನಿಯೇ ಈ ರೋಗದ ಮೂಲ ಹಾಗೂ ಮುಖ್ಯ ಕಾರಕಗ್ರಹ.

ಶನಿಯ ತರುವಾಯ ಗುರುವೂ ಈ ರೋಗದ ಕಾರಕನು. ಏಕೆಂದರೆ ಅಗ್ನಿಮಾಂದ್ಯ ಹಾಗೂ ಕಫದೋಷದ ಮೇಲೆ ಗುರುವು ಕಾರಕನಿರುವನು.

ಶನಿ, ಗುರುಗಳ ತರುವಾಯ ಚಂದ್ರನೂ ಈ ರೋಗದ ಕಾರಕನು. ಏಕೆಂದರೆ ಆಮವಾಗುವಿಕೆ ಇದು ಚಂದ್ರಗ್ರಹದ ಗುಣಧರ್ಮವು.

**ಕಾರಕಲಗ್ನ** :— ಕರುಳಿನ ಮೇಲೆ ಕನ್ಯಾರಾಶಿಯ ಪ್ರಭಾವವಿರುತ್ತದೆ. ಕನ್ಯಾರಾಶಿ ದೂಷಿತವಿರದೆ ಯಾರಿಗೂ ಈ ರೋಗ ಬರಲಾರದು. ಆದುದರಿಂದ ಮೇಷ, ತುಲಾ, ಕುಂಭ ಈ ಲಗ್ನದವರು ತದನಂತರ ಸಿಂಹ, ಕನ್ಯಾ, ಧನು ಈ ಲಗ್ನದವರು ಹೆಚ್ಚಾಗಿ ಈ ರೋಗದಿಂದ ಬಳಲುತ್ತಿರುವದು ಕಂಡು ಬಂದಿದೆ.

**ರಾಶಿ** :— ನಿರ್ದಿಷ್ಟ ರಾಶಿಯವರೇ ಈ ರೋಗದಿಂದ ಬಳಲುತ್ತಿರುವರೆಂದು ಹೇಳಲು ಬಾರದು. ಆದರೆ ಕರ್ಕ, ಕನ್ಯಾರಾಶಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಅಂಥವರು ಈ ರೋಗದಿಂದ ಬಳಲುತ್ತಾರೆ. ಏಕೆಂದರೆ ಕನ್ಯಾರಾಶಿಯ ಕ್ರಿಯೆಯೆಂದರೆ ಶೋಷಣೆ ಮಾಡುವಿಕೆ ಹಾಗೂ ರಸದ ಪರಿಪಾಕ ಮಾಡಿ ಯೋಗ್ಯ ಉಪಯೋಗ ಮಾಡುವಿಕೆ; ಆಮವಾಗುವಿಕೆ ಕರ್ಕರಾಶಿಯ ಕ್ರಿಯೆಯಿರುತ್ತದೆ. ಆದುದರಿಂದ ಕರ್ಕ, ಕನ್ಯಾ ರಾಶಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಅಂಥವರು ಈ ರೋಗದಿಂದ ಬಳಲುವರು.

**ಯೋಗಗಳು**—

೧) ಗುರು ಇಲ್ಲವೆ ಶನಿಯು ಕನ್ಯಾರಾಶಿಯವರಾಗಿ ಷಷ್ಠ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿದ್ದು, ರವಿ-ಮಂಗಳರಿಂದ ದೃಷ್ಟಿಸಲ್ಪಟ್ಟರೆ,

೨) ಅನೇಕ ಗ್ರಹಗಳು ಷಷ್ಠ, ಅಷ್ಟಮದಲ್ಲಿದ್ದರೆ,

೩) ಮಂಗಳನು ಮಿಥುನರಾಶಿಯವನಾಗಿ, ರವಿಯು ಕನ್ಯಾರಾಶಿಯವನಾಗಿ, ಶನಿಯೊಂದಿಗೆ ಅಶುಭಯೋಗವಿದ್ದ, ಈ ಮೂರೂ ಯೋಗಗಳಿದ್ದ ಜಾತಕನಿಗೆ ಈ ರೋಗದ ಭೀತಿಯಿರುತ್ತದೆ.

## ಸಣ್ಣ ಸಣ್ಣ ವಿಕಾರಗಳು

ಕಣ್ಣು, ಕಿವಿ, ಮೂಗು, ತುಟಿ, ನಾಲಿಗೆ, ದಂತ ಮೊದಲಾದ ಅವಯವಗಳ ದುಷ್ಟಿಗೆ ವಿಕೃತಿಗೆ ರೋಗವೆಂದು ಕರೆಯದೆ ವಿಕಾರವೆಂದು ಕರೆಯಬಹುದು. ಇವುಗಳ ವಿವರಣೆಯನ್ನು ಈ ಕೆಳಗೆ ವಿವರಿಸಲಾಗಿದೆ.

## ೫೧. ನೇತ್ರ ವಿಕಾರ

ಚಿಕ್ಕಮಕ್ಕಳಿಗೆ ಹೆಚ್ಚಾಗಿ ನೇತ್ರಾಭಿಶಂಧ (ಕಣ್ಣು ಬರುವಿಕೆ) "(Conjunctivitis)", ಕಣ್ಣು ಕೆಂಪಾಗುವಿಕೆ, ಕಣ್ಣಿನಲ್ಲಿ ಪಿಚ್ಚುಗಟ್ಟುವಿಕೆ, ನೀರು ಸೋರುವಿಕೆ ಮೊದಲಾದ ವಿಕಾರಗಳು ಇದ್ದೇ ಇರುತ್ತವೆ. ಕೆಲವರಿಗೆ ದೃಷ್ಟಿದೋಷ, ನಿಶಾಂಧತೆ, ಕಣ್ಣಿನಲ್ಲಿ ಮೋತೀಬಿಂದು, ಕಾಚಬಿಂದು, ಗುಡ್ಡೆಯಲ್ಲಿ ದೋಷ ಇವೇ ಮೊದಲಾದ ಕಣ್ಣಿನ ವಿಕಾರಗಳನ್ನಾಗಿ ವಿಂಗಡಿಸಬಹುದು. ಈ ವಿಕಾರಗಳ ಕಾರಕಗ್ರಹ, ಸ್ಥಾನ, ರಾಶಿ ಇತ್ಯಾದಿಗಳನ್ನು ಪರಿಶೀಲಿಸುವಾ.

**ಕಾರಕಗ್ರಹ**:— ಯಾವುದೇ ನೇತ್ರ ವಿಕಾರದ ಕಾರಕಗ್ರಹವೆಂದರೆ ರವಿ-ಚಂದ್ರರು. ರವಿ-ಚಂದ್ರರು ದೂಷಿತರಿರದೆ ಯಾರಿಗೂ ನೇತ್ರ ವಿಕಾರವಾಗಲಾರದು. ರವಿ-ಚಂದ್ರರ ತರುವಾಯ ಶುಕ್ರ, ಮಂಗಳರೂ ಕೆಲಮಟ್ಟಿಗೆ ಕಾರಕರಿರುತ್ತಾರೆ,

**ಸ್ಥಾನ**:— ನೇತ್ರಗಳ ಸ್ಥಾನಗಳಾದ ದ್ವಿತೀಯ-ದ್ವಾದಶ ಸ್ಥಾನಗಳೇ ಈ ವಿಕಾರದ ಕಾರಕಸ್ಥಾನಗಳು. ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ದೂಷಿತರಿರದೆ ಯಾರಿಗೂ ಈ ನೇತ್ರ ವಿಕಾರವುಂಟಾಗಲಾರದು.

**ಯೋಗಗಳು**—

೧) ರವಿ ಹಾಗೂ ದ್ವಾದಶಸ್ಥಾನ, ದ್ವಾದಶೇಶ ಇವು ದೂಷಿತವಿದ್ದರೆ ಬಲಗಣ್ಣಿನಲ್ಲಿ ವಿಕಾರವುಂಟಾಗುತ್ತದೆ.

೨) ಚಂದ್ರ ಹಾಗೂ ದ್ವಿತೀಯಸ್ಥಾನ, ದ್ವಿತಿಯೇಶ ಇವು ದೂಷಿತ ವಿದ್ದರೆ, ಎಡಗಣ್ಣು ವಿಕೃತವಾಗುತ್ತದೆ.

೩) ಅಗ್ನಿತತ್ವದ ರಾಶಿಗಳು ನೇತ್ರಸ್ಥಾನದಲ್ಲಿದ್ದು, ದೂಷಿತವಿರ ದಿದ್ದರೆ ನೇತ್ರದೋಷವುಂಟಾಗಲಾರದು.

೪) ಜಲರಾಶಿಗಳು ನೇತ್ರ ವಿಕಾರವನ್ನುಂಟುಮಾಡುವವು.

೫) ರವಿ-ಚಂದ್ರರು, ಮಂಗಳನೊಂದಿಗೆ ಅಶುಭ ಯೋಗದಲ್ಲಿದ್ದರೆ ಅಕಾಲಿಕ ಅಂಧತ್ವವುಂಟಾಗುತ್ತದೆ.

೬) ಶನಿಯ ಅಶುಭ ಯೋಗವು ರವಿ-ಚಂದ್ರರೊಂದಿಗಿದ್ದರೆ ವೃದ್ಧಾಪ್ಯದಲ್ಲಿ ಅಂಧತ್ವವುಂಟಾಗುತ್ತದೆ.

೭) ದುರ್ಬಲ ರವಿ-ಚಂದ್ರರು ದ್ವಿತೀಯ, ದ್ವಾದಶದಲ್ಲಿದ್ದರೆ ಅದರಲ್ಲಿಯೂ ಮೇಷ, ವೃಷಭ, ಕರ್ಕ, ವೃಶ್ಚಿಕ, ಮೀನ ಈ ರಾಶಿಯಲ್ಲಿದ್ದರೆ ನೇತ್ರವಿಕಾರವುಂಟಾಗುತ್ತದೆ.

೮) ಶುಕ್ರನು ದೂಷಿತನಾಗಿ ದ್ವಿತೀಯ, ದ್ವಾದಶದಲ್ಲಿದ್ದರೆ ನೇತ್ರ ವಿಕಾರವನ್ನು ಕೊಡುವನು. ಅದರಲ್ಲಿಯೂ (ಕರ್ಕ, ವೃಶ್ಚಿಕ, ಕನ್ಯಾ, ಮೇಷ, ಸಿಂಹ, ಧನು ಈ ರಾಶಿಗಳ) ಕಣ್ಣಿನಲ್ಲಿ ನೀರ್ಗಚ್ಚು ಉಂಟು ಮಾಡುವನು.

೯) ದ್ವಿತೀಯ, ದ್ವಾದಶದಲ್ಲಿ ಕರ್ಕ, ವೃಶ್ಚಿಕ, ಮೀನ, ಸಿಂಹ ಈ ರಾಶಿಗಳ ರವಿ-ಶನಿಯರ ಯುತಿಯು ನೇತ್ರವಿಕಾರವನ್ನುಂಟುಮಾಡುತ್ತದೆ.

೧೦) ದುರ್ಬಲ ರವಿ-ಚಂದ್ರರು ದ್ವಿತೀಯ ದ್ವಾದಶದಲ್ಲಿದ್ದರೆ ಶಸ್ತ್ರ ಕ್ರಿಯೆ ಮಾಡಬೇಕಾಗುತ್ತದೆ.

೧೧) ರವಿ, ಚಂದ್ರ, ಮಂಗಳ, ಶುಕ್ರ ಇವರ ಯುತಿಯೋಗ ದ್ವಿತೀಯ ದ್ವಾದಶದಲ್ಲಿ ಇಲ್ಲವೆ ಪ್ರತಿಯೋಗ ದ್ವಿತೀಯ, ಅಷ್ಟಮ, ಷಷ್ಠ, ದ್ವಾದಶದಲ್ಲಿದ್ದರೆ ಮೋತೀ-ಕಾಚಬಿಂದು ಮೊದಲಾದ ಕಣ್ಣಿನ ವಿಕಾರವುಂಟಾ ಗುತ್ತದೆ.

೧೨) ಶುಕ್ರ-ಮಂಗಳರ ಅಶುಭಯೋಗವು ದ್ವಿತೀಯ— ದ್ವಾದಶ ದಲ್ಲಿದ್ದರೆ ಅಥವಾ ಜಲರಾಶಿಯ ರವಿ-ಮಂಗಳರು ದ್ವಿತೀಯ, ದ್ವಾದಶದಲ್ಲಿ ದ್ದರೆ ನೇತ್ರವಿಕಾರವುಂಟಾಗುತ್ತದೆ.

೧೩) ಮೇಷ, ವೃಷಭ, ಸಿಂಹ, ವೃಶ್ಚಿಕ, ಧನು ಈ ರಾಶಿಗಳ ಚಂದ್ರನು ದ್ವಿತೀಯ ಇಲ್ಲವೆ ದ್ವಾದಶದಲ್ಲಿದ್ದು, ಶನಿ, ಮಂಗಳ, ರವಿ ಇವರಿಂದ ನೋಡಲ್ಪಟ್ಟರೆ ದೃಷ್ಟಿವಿಕಾರ (Myopia) ವನ್ನುಂಟುಮಾಡುವನು.

೧೪) ಜಲರಾಶಿಯ ರವಿಯು ದ್ವಿತೀಯ ಇಲ್ಲವೆ ದ್ವಾದಶದಲ್ಲಿದ್ದು, ಶನಿಯಿಂದ ನೋಡಲ್ಪಟ್ಟರೆ ನೇತ್ರವಿಕಾರವನ್ನು ಕೊಡುವನು.

೧೫) ಅಶುಭಗ್ರಹ ದೂಷಿತನಾದ ಚಂದ್ರನು ವೃಷಭ, ಕುಂಭದಲ್ಲಿದ್ದರೆ ಕಣ್ಣಿಗೆ ಹಾನಿಕಾರಕನು.

೧೬) ಕೃಷ್ಣಪಕ್ಷದ ಚಂದ್ರನು ದ್ವಿತೀಯ ದ್ವಾದಶದಲ್ಲಿದ್ದರೆ ಅಂಧತ್ವವನ್ನುಂಟುಮಾಡುತ್ತಾನೆ.

೧೭) ಶನಿ–ಮಂಗಳರ ಅಶುಭಯೋಗವು ದ್ವಿತೀಯ ದ್ವಾದಶದಲ್ಲಿದ್ದರೆ ಅಪಘಾತ, ಸ್ಫೋಟಕದ್ರವ್ಯ, ಅಗ್ನಿಯಿಂದ ಹಾನಿಯನ್ನು ಮಾಡುವದು, ಅಥವಾ ಗುಂಡಿನೇಟು, ಮೈಲಿಬೇನೆಯಿಂದ ಅಂಧತ್ವವನ್ನು ಉಂಟುಮಾಡುವದು, ಮತ್ತು ಶಸ್ತ್ರಚಿಕಿತ್ಸೆಗೆ ಒಳಗಾಗಬೇಕಾಗುತ್ತದೆ.

೧೮) ಶನಿಗ್ರಹದಿಂದ ಶೈತ್ಯ, ಥಂಡಿ, ಮೋತೀಬಿಂದು ಮೊದಲಾದ ವಿಕಾರಗಳಾಗಿ ಅಂಧತ್ವವಾಗುವದು.

೧೯) ದ್ವಿತೀಯದಲ್ಲಿ ಕುಜನು, ಷಷ್ಠದಲ್ಲಿ ಚಂದ್ರನು, ದ್ವಾದಶದಲ್ಲಿ ಶನಿಯೂ ಇದ್ದರೆ ನೇತ್ರವಿಕಾರ ಉಂಟುಮಾಡುವರು, ಹಾಗೂ ಶಸ್ತ್ರಚಿಕಿತ್ಸೆ ಮಾಡಬೇಕಾಗುತ್ತದೆ.

೨೦) ಧನದಲ್ಲಿ ರವಿಯೂ ವ್ಯಯದಲ್ಲಿ ಶುಕ್ರನೂ ಇದ್ದರೆ, ಅಥವಾ ಧನದಲ್ಲಿ ರವಿ ವ್ಯಯದಲ್ಲಿ ಶನಿ ಇದ್ದರೆ, ಅಥವಾ ಧನದಲ್ಲಿ ಮಂಗಳ, ವ್ಯಯದಲ್ಲಿ ಶನಿಯಿದ್ದರೆ ಅಂಧತ್ವವುಂಟಾಗುತ್ತದೆ.

೨೧) ಸೂರ್ಯಗ್ರಹಣದಲ್ಲಿ ಜನಿಸಿ ರವಿ–ಚಂದ್ರರು ದ್ವಿತೀಯ, ದ್ವಾದಶದಲ್ಲಿದ್ದು, ಶನಿಯಿಂದ ನೋಡಲ್ಪಟ್ಟರೆ ಅಂಧತ್ವ ಉಂಟಾಗುತ್ತದೆ.

## ೫೨. ಕರ್ಣ ವಿಕಾರಗಳು

**ಕಾರಕಗ್ರಹ :—** ಕರ್ಣ ವಿಕಾರವನ್ನುಂಟುಮಾಡುವ ಗ್ರಹಗಳೆಂದರೆ ಗುರು–ಶನಿಯರು. ಏಕೆಂದರೆ ಶಬ್ದಗ್ರಹಣ ಮಾಡುವ ಕಾರ್ಯ ಹಾಗೂ

ಆಕಾಶ ತತ್ತ್ವದ ಅವಯವವಾದ ಕರ್ಣದ ಮೇಲೆ ಗುರುವಿನ ಆಧಿಪತ್ಯವಿರುತ್ತದೆ. ಶೂಲ, ಶೋಥ, ಹೊಡೆತ ಮೊದಲಾದ ವಾತಪ್ರಧಾನ ದೋಷಗಳಿರುವದರಿಂದ ಶನಿಯೂ ಈ ರೋಗದ ಕಾರಕನು. ಆದುದರಿಂದ ಗುರು–ಶನಿಯರು ದೂಷಿತರಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ಸ್ಥಾನ :**— ಕರ್ಣಸ್ಥಾನವಾದ ತೃತೀಯ ಸ್ಥಾನವೇ ಈ ವಿಕಾರದ ಕಾರಕಸ್ಥಾನವು. ಆದುದರಿಂದ ತೃತೀಯ ಸ್ಥಾನ, ತೃತೀಯೇಶ ದೂಷಿತರಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ಯೋಗಗಳು :—**

೧) ವಾಯುರಾಶಿಯ ಶನಿಯು ತೃತೀಯ ಸ್ಥಾನದಲ್ಲಿದ್ದರೆ ಬಧಿರತ್ವವನ್ನು ಕೊಡುವನು.

೨) ವಾಯುರಾಶಿಯ ಶನಿ–ಮಂಗಳರು ತೃತೀಯದಲ್ಲಿದ್ದರೆ ಕರ್ಣವಿಕಾರವನ್ನುಂಟುಮಾಡುವರು.

೩) ತೃತೀಯ ಸ್ಥಾನದಲ್ಲಿ ವೃಷಭರಾಶಿಯ ಮಂಗಳನಿದ್ದರೆ ಅಥವಾ ಶನಿ-ಮಂಗಳರಿದ್ದರೆ "ಕರ್ಣ ಮೂಲ ಶೋಥ" ಎಂಬ ರೋಗವನ್ನುಂಟು ಮಾಡುತ್ತಾನೆ.

೪) ಜಲರಾಶಿಯ ಮಂಗಳನು ತೃತೀಯದಲ್ಲಿದ್ದು, ತೃತೀಯೇಶ ದುರ್ಬಲನಿದ್ದರೆ ಬಧಿರತ್ವವನ್ನು ಕೊಡುವನು.

೫) ತೃತೀಯದಲ್ಲಿ ದೂಷಿತ ರಾಹು, ಮಂಗಳರಿದ್ದರೆ ಬಧಿರತ್ವವನ್ನು ಕೊಡುವರು.

೬) ಅನೇಕ ಗ್ರಹಗಳು ತೃತೀಯ, ನವಮದಲ್ಲಿದ್ದರೆ ಬಧಿರತ್ವವುಂಟಾಗುತ್ತದೆ.

೭) ತೃತೀಯೇಶ ಪಾಪಗ್ರಹಯುಕ್ತನಾಗಿ ಪಾಪಗ್ರಹಮಧ್ಯದಲ್ಲಿದ್ದರೆ ಕರ್ಣವಿಕಾರವನ್ನು ಕೊಡುವನು.

೮) ಪಾಪಗ್ರಹಗಳು ೩, ೫, ೯, ೧೧ ಈ ಸ್ಥಾನಗಳಲ್ಲಿದ್ದರೆ ಬಧಿರತ್ವವು ಉಂಟಾಗುತ್ತದೆ.

## ೫೩. ನಾಸಿಕಾ ವಿಕಾರ

ಮೂಗಿನಲ್ಲಿ ದುರ್ವಾಸನೆ ಉಂಟಾಗುವಿಕೆ, ಮಾಂಸ ಬೆಳೆಯುವಿಕೆ, ಅಸ್ಥಿ ಬೆಳೆಯುವಿಕೆ, ಕೀವು ಆಗುವಿಕೆ, ಅರ್ಶವಾಗುವಿಕೆ, ಮೂಗು ಉಬ್ಬುವಿಕೆ, ಗಂಧ ಗೊತ್ತಾಗದಿರುವಿಕೆ, ಇದಲ್ಲದೆ ಪೀನಸ, ನೆಗಡಿ, ದುಷ್ಟವಾದ ದೋಷ ಗಳಿಂದ ಮೂಗು ಕಟ್ಟಿದಂತಾಗುವದಲ್ಲದೆ ಶ್ಲೇಷ್ಮವು ಹೊರಬೀಳುವದು. ಇದಕ್ಕೆ ವ್ಯವಹಾರದಲ್ಲಿ ಪೀನಸಿ ಎನ್ನುವರು. ಇವೇ ಮೊದಲಾದ ನಾಸಿಕಾ ವಿಕಾರ ಗಳು ಇರುತ್ತವೆ. ಇನ್ನು ಜ್ಯೋತಿಷ್ಯ ದೃಷ್ಟಿಯಲ್ಲಿ ನಾಸಿಕಾ ವಿಕಾರದ ಕಾರಕಗ್ರಹ, ರಾಶಿಸ್ಥಾನಗಳಾವವು ಎಂಬುದನ್ನು ನೋಡುವಾ.

**ಕಾರಕಗ್ರಹ :—** ಪಂಚ ಮಹಾಭೂತ ತತ್ವದಲ್ಲಿ ಘ್ರಾಣೇಂದ್ರಿಯವು ಪೃಥ್ವಿತತ್ವದ್ದು ಇರುತ್ತದೆ. ಪೃಥ್ವಿತತ್ವದ ಕಾರಕನೂ, ಗಂಧಾಧಿಕಾರನೂ, ನಾಸಿಕಾವಯವದ ಕಾರಕನೂ ಆದ ಬುಧನೇ ಈ ರೋಗದ ಕಾರಕನು. ಜಾತಕದಲ್ಲಿ ಬುಧನು ಬಲಾಢ್ಯನಿದ್ದರೆ ನಾಸಿಕಾ ವಿಕಾರ ಉಂಟಾಗಲಾರದು.

ಈ ನಾಸಿಕಾ ವಿಕಾರದಲ್ಲಿ ಅನೇಕ ಪ್ರಕಾರಗಳಿರುವದರಿಂದ ಅನೇಕ ಗ್ರಹ ಗಳೂ ಕಾರಕಗಳಿರುತ್ತವೆ. ನಾಸಿಕದಲ್ಲಿ ಅಸ್ಥಿ ಬೆಳೆಯುವಿಕೆ ಇದು ರವಿ ಗುಣ ಧರ್ಮದ್ದು ಇರುತ್ತದೆ. ಏಕೆಂದರೆ ಅಸ್ಥಿಯ ಮೇಲೆ ರವಿಯ ಆಧಿಪತ್ಯವಿರು ತ್ತದೆ. ನೆಗಡಿಯಾಗುವಿಕೆ, ನೆಗಡಿ, ಲಸಿಕಾ, ಪೂಯ— ಇವು ಚಂದ್ರನ ಗುಣ ಧರ್ಮವಿರುತ್ತವೆ. ನಾಸಿಕದಲ್ಲಿ ದಾಹವಾಗುವಿಕೆ ಇದು ಮಂಗಳನ ಗುಣಧರ್ಮ ದ್ದಿರುತ್ತದೆ. ಗಂಧಗ್ರಹಣದಲ್ಲಿ ವಿಕೃತವಾಗುವಿಕೆ ಇದು ಬುಧಗ್ರಹದ ಗುಣ ಧರ್ಮವಿರುತ್ತದೆ. ಉಸಿರಾಡಿಸುವ ವಿಕೃತಿ, ಪ್ರಾಣವಾಯುವಿನ ಕೊರತೆ ಇವು ಶನಿಯ ಗುಣಧರ್ಮದವಿರುತ್ತವೆ. ಉಪದಂಶ ಮೊದಲಾದ ರೋಗ ಗಳಲ್ಲಿ ಶುಕ್ರನು ನಾಸಿಕರೋಗವನ್ನುಂಟುಮಾಡುವನು. ಆದುದರಿಂದ ನಾಸಿಕಾ ವಿಕಾರಗಳಿಗೆ ನಿರ್ದಿಷ್ಟ ಗ್ರಹವೇ ಕಾರಕವೆಂದು ತಿಳಿಯದೆ ಆಯಾ ವಿಕಾರದ ಕಾರಕಗ್ರಹಗಳ ಬಲಾಬಲವನ್ನೂ ಯೋಗಾಯೋಗಗಳನ್ನೂ ಪರಿ ಶೀಲಿಸಬೇಕು.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯಸ್ಥಾನವೇ

ನಾಸಿಕದ ಸ್ಥಾನವಿರುವದರಿಂದ ಈ ವಿಕಾರಗಳಿಗೆ ದ್ವಿತೀಯ ಸ್ಥಾನ, ದ್ವಿತಿ-ಯೇಶರ ಬಲಾಬಲವನ್ನು ಪರಿಶೀಲಿಸಬೇಕು.

**ಲಗ್ನ :—** ಜಾತಕದಲ್ಲಿ ವೃಷಭ, ವೃಶ್ಚಿಕ ಈ ರಾಶಿಗಳೇ ನಾಸಿಕಾ ರೋಗವನ್ನುಂಟುಮಾಡುತ್ತವೆ. ಈ ರಾಶಿಗಳು ಜಾತಕದಲ್ಲಿ ದೂಷಿತವಿರದೆ ಯಾರಿಗೂ ಈ ವಿಕಾರವನ್ನುಂಟುಮಾಡಲಾರವು. ಆದುದರಿಂದ ಮೇಷ, ಮಿಥುನ, ತುಲಾ, ಧನು ಈ ಲಗ್ನದವರಿಗೆ ಹೆಚ್ಚಾಗಿ ಈ ವಿಕಾರಗಳುಂಟಾಗುತ್ತವೆ.

**ಯೋಗಗಳು—**

೧) ರವಿಯು ವೃಷಭರಾಶಿಯಲ್ಲಿದ್ದರೆ ನೆಗಡಿ, ಸರ್ದಿ ( Palipas ) ಈ ಮೊದಲಾದ ವಿಕಾರಗಳನ್ನುಂಟುಮಾಡುವನು.

೨) ರವಿಯು ವೃಶ್ಚಿಕದಲ್ಲಿದ್ದರೆ ಅಥವಾ ಜಲರಾಶಿಯ ರವಿಯು ಅಥವಾ ದುರ್ಬಲ ರವಿಯು ದ್ವಿತೀಯ ದ್ವಾದಶ, ಅಷ್ಟಮದಲ್ಲಿದ್ದರೆ, ನಾಶಿಕದಲ್ಲಿ ಅಸ್ಥಿವೃದ್ಧಿಯಾಗುತ್ತದೆ.

೩) ವೃಶ್ಚಿಕ, ವೃಷಭದಲ್ಲಿಯ ರವಿಯು ಸ್ವರವಿಕೃತಿಯನ್ನುಂಟುಮಾಡುವನು.

೪) ಮೇಷ, ಕರ್ಕ, ವೃಶ್ಚಿಕ, ಮೀನ ಈ ರಾಶಿಗಳ ಚಂದ್ರನು ಲಗ್ನ, ದ್ವಿತೀಯ, ಅಷ್ಟಮದಲ್ಲಿದ್ದರೆ ಸದಾ ನೆಗಡಿಯಿಂದ ಬಳಲುವರು.

೫) ಮಂಗಳನು ವೃಷಭ, ವೃಶ್ಚಿಕ ರಾಶಿಯವನಾಗಿ ದ್ವಿತೀಯ, ಅಷ್ಟಮದಲ್ಲಿದ್ದರೆ ನಾಸಿಕಾದಾಹವನ್ನು ಕೊಡುವನು.

೬) ಶುಕ್ರನು ಮೇಷರಾಶಿಯವನಾಗಿ ದ್ವಿತೀಯ, ಅಷ್ಟಮದಲ್ಲಿದ್ದರೆ ನಾಸಿಕಾ ರೋಗವನ್ನುಂಟುಮಾಡುವನು.

## ೫೪. ದಂತವಿಕಾರ

ಹಲ್ಲಿನ ಒಸಡಿ ಬಾಯುವಿಕೆ, ಹಲ್ಲಿನಲ್ಲಿ ಕೀವು ಬರುವಿಕೆ, ದಂತಶೂಲ, ಹಲ್ಲು ಅಲುಗಾಡುವಿಕೆ, ಒಂದರ ಮೇಲೊಂದು ಹಲ್ಲು ಬರುವಿಕೆ ಇವೇ ಮೊದಲಾದವು ದಂತವಿಕಾರಗಳಿರುತ್ತವೆ.

**ಕಾರಕಗ್ರಹ :—** ಅಸ್ಥಿಯಲ್ಲಿ ವೃದ್ಧಿಯಾದರೆ ವಿಕೃತಿಯಾದರೆ ಹಲ್ಲುಗಳ ಮೇಲೆ ಪರಿಣಾಮವಾಗುತ್ತದೆಂದು ಆಯುರ್ವೇದ ಶಾಸ್ತ್ರವು ಹೇಳುತ್ತದೆ. ಅಸ್ಥಿಯ ಮೇಲೆ ರವಿಯೇ ಕಾರಕನು. ಆದುದರಿಂದ ಈ ವಿಕಾರದ ಕಾರಕ ಗ್ರಹವೆಂದರೆ ರವಿಯು. ಆದುದರಿಂದ ರವಿಯು ದೂಷಿತನಿರದ ಯಾರಿಗೂ ದಂತವಿಕಾರವಾಗಲಾರದು.

ದಂತಶೂಲ ಮೊದಲಾದ ವಿಕಾರಗಳಿಗೆ ಕುಜನು ಕಾರಕನು. ಆದುದರಿಂದ ಕುಜನು ಈ ರೋಗದ ಕಾರಕನು.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯ ಸ್ಥಾನವೇ ಈ ವಿಕಾರದ ಕಾರಸ್ಥಾನವು. ದ್ವಿತೀಯದ ನಂತರ ತನುಸ್ಥಾನವನ್ನು ಪರಿಶೀಲಿಸಬೇಕು.

**ಲಗ್ನ : —** ಹಲ್ಲಿನ ಒಸಡಿ ಬಾಯುವಿಕೆ, ಹಲ್ಲಿನಲ್ಲಿ ಹೂಯವಾಗುವಿಕೆ ಇವು ವೃಷಭರಾಶಿಯ ಗುಣಧರ್ಮಗಳರುತ್ತವೆ. ಆದುದರಿಂದ ವೃಷಭರಾಶಿ ದೂಷಿತವಾದರೆ ಈ ವಿಕಾರ ಉಂಟಾಗುತ್ತದೆ. ಮೇಷ, ಮಿಥುನ, ತುಲಾ, ಧನು ಈ ಲಗ್ನದವರಿಗೆ ದಂತವಿಕಾರ ಹೆಚ್ಚಾಗಿರುವದು ಕಂಡು ಬರುತ್ತದೆ.

**ಯೋಗಗಳು—**

೧) ಜಲರಾಶಿ ಇಲ್ಲವೆ ಅಗ್ನಿರಾಶಿಗಳು ಲಗ್ನದಲ್ಲಿದ್ದರೆ ಹಲ್ಲುಗಳು ಚೆನ್ನಾಗಿರಲಾರವು.

೨) ಮೇಷ, ಸಿಂಹ, ವೃಶ್ಚಿಕ, ಧನು ಈ ಲಗ್ನದವರ ಹಲ್ಲುಗಳು ದಪ್ಪವಿರುತ್ತವೆ ಅಥವಾ ಹಲ್ಲಿನ ಪಂಕ್ತಿಗಳು ಸರಳ, ಸುಂದರವಿರುವದಿಲ್ಲ.

೩) ಅಗ್ನಿತತ್ವದ ರಾಶಿಯಲ್ಲಿ ಶೀತಲತತ್ವದ ಗ್ರಹಗಳು ಲಗ್ನ, ದ್ವಿತೀಯ, ಅಷ್ಟಮದಲ್ಲಿದ್ದರೆ ಅಥವಾ ಜಲತತ್ವದ ರಾಶಿಯಲ್ಲಿ ಅಗ್ನಿತತ್ವದ ಗ್ರಹಗಳು ಲಗ್ನ, ದ್ವಿತೀಯ, ಅಷ್ಟಮದಲ್ಲಿದ್ದರೆ ದಂತವಿಕಾರವುಂಟಾಗುತ್ತದೆ.

೪) ದ್ವಿತಿಯೇಶ ರಾಹುಯುಕ್ತನಾಗಿ ದ್ವಿತೀಯ, ಷಷ್ಠ, ಅಷ್ಟಮ, ದ್ವಾದಶಸ್ಥಾನಗಳಿದ್ದರೆ, ದಂತಪತನಗಳು ಮೇಲಿಂದ ಮೇಲೆ ಆಗುತ್ತವೆ.

೫) ಅಗ್ನಿ ಇಲ್ಲವೆ ಜಲರಾಶಿಯ ಶನಿ, ಮಂಗಳ, ಕೇತು ಈ ಗ್ರಹಗಳು ಲಗ್ನ, ದ್ವಿತೀಯದಲ್ಲಿದ್ದರೆ ದಂತವಿಕಾರವುಂಟಾಗುತ್ತದೆ.

೬) ವೃಷಭ, ವೃಶ್ಚಿಕ ರಾಶಿಗಳ ಶನಿಯು ಲಗ್ನ, ದ್ವಿತೀಯ, ಅಷ್ಟಮದಲ್ಲಿದ್ದರೆ ದಂತವಿಕಾರವನ್ನುಂಟುಮಾಡುವನು.

೭) ಲಗ್ನ, ದ್ವಿತೀಯದಲ್ಲಿ ಕೇತುವಿದ್ದರೆ ಹಲ್ಲುಗಳು ಡೊಂಕಾಗಿರುತ್ತವೆ.

## ೫೫. ವಾಣಿ ವಿಕಾರ

ಉಗ್ಗುವಿಕೆ ((Stammering), ಮೂಕತನ ಇವೇ ಮೊದಲಾದ ವಾಣಿ ವಿಕಾರಗಳಿರುತ್ತವೆ.

**ಕಾರಕಗ್ರಹ :—** ವಾಣಿಯು ವಿಕೃತವಾಗಲು ವಾಗೀಶನಾದ ಬುಧನೇ ಕಾರಕನು. ಬುಧನು ದೂಷಿತ, ದುರ್ಬಲನಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ಸ್ಥಾನ :—** ವಾಣಿಸ್ಥಾನವೆಂದರೆ ದ್ವಿತೀಯಸ್ಥಾನವು. ಆದುದರಿಂದ ದ್ವಿತೀಯಸ್ಥಾನ ಮತ್ತು ದ್ವಿತೀಯೇಶರು ದೂಷಿತರರದೆ ಯಾರಿಗೂ ಈ ವಿಕಾರವುಂಟಾಗುವದಿಲ್ಲ.

**ಯೋಗಗಳು**

೧) ಶನಿ, ರಾಹುಗಳು ದ್ವಿತೀಯ, ಅಷ್ಟಮಗಳಿದ್ದರೆ ವಾಣಿ ವಿಕೃತಿಯನ್ನುಂಟುಮಾಡುವರು.

೨) ದ್ವಿತೀಯದಲ್ಲಿ ಪೃಥ್ವಿ ಹಾಗೂ ವಾಯುರಾಶಿಗಳಿದ್ದು ಈ ಸ್ಥಾನಾಧೀಶರು ಮತ್ತು ಸ್ಥಾನವು ದೂಷಿತವಿರದಿದ್ದರೆ ವಾಣಿಯು ವಿಕೃತಿಯಾಗುವದಿಲ್ಲ.

೩) ಅಗ್ನಿ ಹಾಗೂ ಜಲರಾಶಿಗಳು ದ್ವಿತೀಯಸ್ಥಾನದಲ್ಲಿರುವದು ವಾಣಿಗೆ ಬಾಧಕವು.

## ಮುಖಪಾಕ-ಬಾಯಿಬರುವಿಕೆ (Stomatitis)
## ಹುಗುಳು (Ranula)

**ಮುಖಪಾಕ:—** ಮುಖಪಾಕ ಇದಕ್ಕೆ ಹುಗುಳು ಅಥವಾ ಬಾಯಿ ಬರೋಣ ಎಂಬ ಪ್ರಚಲಿತದ ಹೆಸರು. ಈ ವಿಕಾರ ಪ್ರಖರವಿಲ್ಲದಿದ್ದರೂ ವಿಕಾರವುಂಟಾದಾಗ ಬಾಯಿಯಲ್ಲಿ ಉಪ್ಪು, ಕಾರ ಮೊದಲಾದ ಏನನ್ನೂ ತಿನ್ನಗೊಡುವದಿಲ್ಲ. ಇದು ಸ್ವತಂತ್ರವಾಗಿಯೂ ಇಲ್ಲವೆ ಉಪದ್ರವರೂಪ ವಾಗಿಯೂ ಬರುವ ಸಂಭವವಿದೆ.

**ಕಾರಕಗ್ರಹ:—** ನಾಲಿಗೆಯ ಮೇಲೆ ರಸಗ್ರಹಣಕಾರಕನಾದ ಬುಧನು ಅಧಿಪತಿಯು. ನಾಲಿಗೆಯು ಅಪ್ ತತ್ವದ್ದು ಇರುವದರಿಂದ ಚಂದ್ರನು ಅಧಿ-ಪತಿಯು. ಆದುದರಿಂದ ಈ ಎರಡೂ ಗ್ರಹಗಳು ಬಲಾಢ್ಯರಿರುವವರಿಗೆ ಈ ವಿಕಾರ ಉಂಟಾಗಲಾರದು.

ಈ ವಿಕಾರದಲ್ಲಿ ನಾಲಿಗೆ ಹಾಗೂ ತುಟಿಗಳಿಗೆ ಬಿರುಕು ಉಂಟಾಗುವದು. ನಾಲಿಗೆಯ ಮೇಲೆ ಕೆಂಪು ಬಕ್ಕೆಗಳೇಳುವದು, ಒಮ್ಮೊಮ್ಮೆ ಬಾಯಿ ತೆರೆಯು ವದೂ ಕಠಿಣವಾಗುವಿಕೆ, ಉಷ್ಣ, ಕಾರ, ಲವಣಯುಕ್ತ ಆಹಾರಗಳನ್ನು ಸೇವಿಸುವದು ಕಠಿಣವಾಗುವಿಕೆ ಈ ಎಲ್ಲ ಭಾವನೆಗಳು ಹಾಗೂ ಲಕ್ಷಣಗಳು ಪಿತ್ತಪ್ರಧಾನ (ಪಿತ್ತವೃದ್ಧಿ) ದೋಷ ತೋರಿಸುವದರಿಂದ ರವಿ–ಮಂಗಳರೇ ಈ ರೋಗದ ಮೂಲ ಹಾಗೂ ಮುಖ್ಯ ಕಾರಕರು.

**ಸ್ಥಾನ:—** ದ್ವಿತೀಯಸ್ಥಾನವೇ ಈ ವಿಕಾರದ ಕಾರಕಸ್ಥಾನವು.

**ಲಗ್ನ:—** ನಾಲಿಗೆಯ ಮೇಲೆ ವೃಷಭರಾಶಿಯ ಆಧಿಪತ್ಯವಿರುವದ ರಿಂದ ವೃಷಭರಾಶಿ ಜಾತಕದಲ್ಲಿ ದೂಷಿತವಿರುತ್ತದೆ. ಆದುದರಿಂದ ಮೇಷ, ವೃಷಭ, ಮಿಥುನ, ತುಲಾ, ಧನು ಈ ಲಗ್ನದವರಿಗೆ ಇದರ ವಿಕಾರ ಬಹಳ.

**ರಾಶಿ:—** ಅಗ್ನಿ ತತ್ವದ ರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿಗೆ ಇದರ ಉಪದ್ರವ ಬಹಳ, ಅಥವಾ ಉಚ್ಚ ಸ್ವಕ್ಷೇತ್ರ ರಾಶಿ ಯವರಾದ ರವಿ–ಮಂಗಳರು ದ್ವಿತೀಯ, ಅಷ್ಟಮ, ಲಗ್ನ ಈ ಸ್ಥಾನದಲ್ಲಿ ರುವವರಿಗೂ ಇದರ ಉಪದ್ರವ ಬಹಳ.

## ೫೬. ಉಪಜಿಹ್ವಿಕಾ (ಕಿರುನಾಲಿಗೆ ಬೀಳುವಿಕೆ)

ಕಿರುನಾಲಿಗೆಯು ಕೆಂಪಗಾಗಿ ಬಾವುವುಳ್ಳದ್ದಾಗುತ್ತದೆ. ಇದಲ್ಲದೆ ಗಂಟಲು ಕೆರೆಯುವದು, ಜೊಲ್ಲು ಬಹಳ ಸುರಿಯುವದು ಇವೇ ಮೊದಲಾದ ಲಕ್ಷಣಗಳಿರುವದರಿಂದ ಇದಕ್ಕೆ ಕಿರುನಾಲಿಗೆ ಬೀಳುವಿಕೆ ಎನ್ನುತ್ತಾರೆ.

**ಕಾರಕಗ್ರಹ :—** ನಾಲಿಗೆಯ ಮೇಲೆ ಬುಧ-ಚಂದ್ರರು ಕಾರಕರಿರುವದರಿಂದ ಬುಧ-ಚಂದ್ರರು ದೂಷಿತರಿರದೆ ಈ ವಿಕಾರವುಂಟಾಗಲಾರದು. ಏಕೆಂದರೆ ಬುಧನು ತ್ರಿದೋಷಕಾರಕನಿರುವದರಿಂದ ಶೋಥ, ಬಾವು, ಕೆಂಪಗಾಗುವಿಕೆ ಲಕ್ಷಣಗಳನ್ನುಂಟುಮಾಡುತ್ತಾನೆ. ಚಂದ್ರನು ಗಂಟಲುನೋವು, ಜೊಲ್ಲು ಬರುವಿಕೆ ಮೊದಲಾದ ಲಕ್ಷಣಗಳ ಕಾರಕನು.

**ಲಗ್ನ :—** ನಾಲಿಗೆಯ ಮೇಲೆ ವೃಷಭರಾಶಿಯು ಆಧಿಪತ್ಯವಿರುವದರಿಂದ ವೃಷಭರಾಶಿ ದೂಷಿತವಾಗದೆ ಯಾರಿಗೂ ಈ ವಿಕಾರವುಂಟಾಗಲಾರದು. ಆದುದರಿಂದ ಮೇಷ, ಮಿಥುನ, ತುಲಾ, ಧನು ಈ ಲಗ್ನದವರಿಗೆ ಈ ವಿಕಾರ ಬಹಳ.

**ಸ್ಥಾನ:** - ದ್ವಿತೀಯ ಸ್ಥಾನವೇ ನಾಲಿಗೆಯ ಸ್ಥಾನವಿರುವದರಿಂದ ದ್ವಿತೀಯೇಶ ಹಾಗೂ ದ್ವಿತೀಯಸ್ಥಾನ ದೂಷಿತರಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

## ೫೭. ಸ್ವರವಿಕಾರ (Aphasia and Hoarsences)

ಅತಿಶಯ ಉಚ್ಚ ಸ್ವರದಿಂದ ಮಾತನಾಡುವ ಭಾಷಣಕಾರರಿಗೆ, ರಾಜಕಾರಣಿಗಳಿಗೆ, ಶಿಕ್ಷಕರಿಗೆ, ಅತಿ ಉಚ್ಚಸ್ವರದಿಂದ ವೇದಾದಿಗಳನ್ನು ಪಠಣ ಮಾಡುವ ಅರ್ಚಕರಿಗೆ ಮೇಲಿಂದ ಮೇಲೆ ಪ್ರವಾಸ ಮಾಡುವ, ನೀರು ಬದಲಾಯಿಸುವ (ಡ್ರೈವರ್, ಇನ್‌ಸ್ಪೆಕ್ಟರ್ಸ್), ಜನರಿಗೆ ಸತತ ಹಾಡುವವರಿಗೆ (ಸಂಗೀತಗಾರರಿಗೆ) ಈ ಮೊದಲಾದ ಕಾರಣಗಳಿಂದ ಸ್ವರಭೇದ ಇಲ್ಲವೆ ಸ್ವರವಿಕಾರವುಂಟಾಗುತ್ತದೆ. ಇದಲ್ಲದೆ ಮಾಟ, ಮದ್ದುಗಳ ಪ್ರಭಾವದಿಂದಲೂ ಈ ವಿಕಾರ ಉಂಟಾಗುತ್ತದೆ.

**ಕಾರಕಗ್ರಹ:—** ಸ್ವರದ ಮೇಲೆಯೂ, ಕಂಠದ ಮೇಲೆಯೂ ಶುಕ್ರನು

ಆಧಿಪತ್ಯ ಪಡೆದಿದ್ದಾನೆ. ಇದಲ್ಲದೆ ಇದು ಕಫ-ವಾತದೋಷ ಪ್ರಧಾನ ವಿಕಾರವಿರುತ್ತದೆ. ಕಂಠಸ್ಥಾನವು ಕಫಸ್ಥಾನವಿರುತ್ತದೆ. ಸ್ವರ ವಿಕೃತವಾಗಲು ಉದಾನವಾಯು ವಿಕೃತವಿರುತ್ತದೆ. ಶುಕ್ರನು ಕಫ, ವಾತದೋಷದ ಕಾರಕನು. ಆದುದರಿಂದ ಶುಕ್ರನು ದೂಷಿತನಿರದೆ ಯಾರಿಗೂ ಈ ವಿಕಾರ ಉಂಟಾಗುವದಿಲ್ಲವಾದ್ದರಿಂದ ಶುಕ್ರನೇ ಈ ರೋಗದ ಕಾರಕನು.

**ಸ್ಥಾನ :—** ಶಬ್ದಶಾಸ್ತ್ರ ಪಂಡಿತರಾದ ಪಾಣಿನೀಮಹರ್ಷಿಗಳು ಶಬ್ದೋತ್ಪತ್ತಿಯ ರೀತಿಯನ್ನು ಹೀಗೆ ಹೇಳಿದ್ದಾರೆ. "ಆತ್ಮ ಬುದ್ಧಿಯೊಡನೆ ಕೂಡಿಕೊಂಡು ಏನೋ ಹೇಳುವ ಇಚ್ಛೆಯಿಂದ ಮನಸ್ಸಿಗೆ ಈ ಕಾರ್ಯಕ್ಕೋಸ್ಕರ ನಿಯೋಜಿಸುವನು. ನಂತರ ಮನಸ್ಸು ಕಾಯಾಗ್ನಿಗೆ ಪ್ರೇರಣೆ ಮಾಡುವದು. ಕಾಯಾಗ್ನಿಯು ವಾಯುವಿಗೆ (ಉದಾನವಾಯು) ಪ್ರೇರಿಸುವದು. ಈ ವಾಯು ಉರಸ್ಥಳದಲ್ಲಿ ಮೆಲ್ಲನೆ ಸಂಚರಿಸುತ್ತ ಊರ್ಧ್ವಗತಿಯಿಂದ ಮಸ್ತಕ (ಮೆದುಳು)ವನ್ನು ಪ್ರವೇಶಿಸಿ ಮುಖವನ್ನು ಹೊಂದಿ ವಾಣ್ಯೋತ್ಪತ್ತಿಯ ಉರಸ್ಸು, ಕಂಠ, ಶಿರ, ಜಿಹ್ವಾಮೂಲ, ದಂತ, ನಾಸಿಕ ತುಟಿ, ಅಂಗಳ ಈ ಎಂಟು ಸ್ಥಾನಗಳ ಸಂಪರ್ಕದಿಂದ ಸ್ವರೋತ್ಪತ್ತಿಯನ್ನುಂಟುಮಾಡುತ್ತದೆ." ಕಂಠ, ನಾಸಿಕ, ಜಿಹ್ವಾಮೂಲ, ತುಟಿ, ಅಂಗಳ, ದಂತ ಹಾಗೂ ಉದಾನವಾಯು ಈ ಎಲ್ಲ ಅವಯವಗಳ ಮೇಲೆ ದ್ವಿತೀಯ ಸ್ಥಾನದ ಆಧಿಪತ್ಯವಿರುವದರಿಂದ ದ್ವಿತೀಯ ಸ್ಥಾನವೇ ಇದರ ಕಾರಕ ಸ್ಥಾನವು. ದ್ವಿತೀಯ ಸ್ಥಾನ, ದ್ವಿತೀಯೇಶರು ದೂಷಿತರಿರದೆ ಯಾರಿಗೂ ಈ ವಿಕಾರವುಂಟಾಗಲಾರದು.

ದ್ವಿತೀಯಸ್ಥಾನದ ನಂತರ ತನುಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಉರಸ್ಸು, ಶಿರ, ಮೆದುಳು ಸ್ಥಾನಗಳಾದ ತನುಸ್ಥಾನವನ್ನೂ ಪರಿಶೀಲಿಸಬೇಕಾಗುತ್ತದೆ.

ದ್ವಿತೀಯ ಹಾಗೂ ತನುಸ್ಥಾನಗಳ ನಂತರ ಅಷ್ಟಮಸ್ಥಾನವನ್ನೂ ಕೆಲ ಮಟ್ಟಿಗೆ ಪರಿಶೀಲಿಸಬೇಕು. ಏಕೆಂದರೆ ಅಷ್ಟಮಸ್ಥಾನದಲ್ಲಿರುವ ಗ್ರಹಗಳ ಪರಿಣಾಮವು ದ್ವಿತೀಯದ ಮೇಲೆ ಆಗುತ್ತದೆ.

**ಲಗ್ನ :—** ಧ್ವನಿಯ ಮೇಲೆಯೂ, ಕಂಠದ ಮೇಲೆಯೂ, ಉದಾನ ವಾಯುವಿನ ಮೇಲೆಯೂ, ವೃಷಭರಾಶಿಯ ಆಧಿಪತ್ಯವಿರುತ್ತದೆ. ವೃಷಭ

ರಾಶಿಯು ದೂಷಿತವಿರದೆ ಯಾರಿಗೂ ಈ ವಿಕಾರವುಂಟಾಗಲಾರದು. ಆದುದರಿಂದ ಮೇಷ, ಮಿಥುನ, ತುಲಾ, ಧನು ಈ ಲಗ್ನದವರೇ ಈ ವಿಕಾರರಿಂದ ಹೆಚ್ಚಾಗಿ ಬಳಲುವದು ಕಂಡುಬಂದಿದೆ.

ರಾಶಿ :— ಜಲರಾಶಿಗಳು ಸ್ವರವಿಕಾರವನ್ನು ತರುತ್ತವೆ. ಜಲರಾಶಿಗಳು ದ್ವಿತೀಯ ಇಲ್ಲವೆ ಅಷ್ಟಮಸ್ಥಾನಗಳಲ್ಲಿದ್ದು, ಆ ಸ್ಥಾನಗಳಲ್ಲಿ ಬುಧ, ರಾಹು, ಶುಕ್ರಗಳಿದ್ದರೆ ಈ ವಿಕಾರ ಉಂಟಾಗುತ್ತದೆ.

## ೫೮. ತ್ವಚೆ ರೋಗಗಳು (Skin diseases)

**ತ್ವಚೆರೋಗದಲ್ಲಿಯ ಪ್ರಕಾರಗಳು :—** ಕಂಡು, ಗಜಕರ್ಣ, ಒಣ ಹಾಗೂ ಹಸಿ ಕಜ್ಜಿ ಇಸಬು, ಹುಣ್ಣು (ಕುರ), ಚಿಬ್ಬು (ಸಿಧ್ಮ), ಬೆವರಸಾಲಿ, ಮಹಾರೋಗ ಇವೇ ಮೊದಲಾದವುಗಳಿಗೆ ತ್ವಚೆ ರೋಗವೆನ್ನುವರು.

ಶರೀರದಲ್ಲಿ ವಾತ, ಪಿತ್ತ, ಕಫ, ರಸ, ರಕ್ತ, ಮಾಂಸ, ತ್ವಚೆ ಈ ಏಳೂ ದುಷ್ಟವಾಗುವದರಿಂದ ತ್ವಚೆ ರೋಗವುಂಟಾಗುತ್ತದೆ. ಆದುದರಿಂದ ಈ ರೋಗದ ಕಾರಕಗ್ರಹ ಯಾವದು ಎಂಬುದು ಸಮಸ್ಯೆಯೇ. ಇದಲ್ಲದೆ ಭಿನ್ನ ಭಿನ್ನ ತ್ವಚೆ ರೋಗಗಳಿಗೆ ಕಾರಕಗ್ರಹ, ಸ್ಥಾನಾದಿಗಳು ಕೂಡ ಬೇರೆ ಬೇರೆ ಇರುತ್ತವೆ. ಇವುಗಳೆಲ್ಲವುಗಳ ವಿಶ್ಲೇಷಣೆ ಮಾಡುವದೆಂದರೆ ಅದೊಂದು ಸ್ವತಂತ್ರವಾದ ಪುಸ್ತಕವಾಗುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ಸ್ಥೂಲವಾದ ವಿವರಣೆಯನ್ನು ಮಾತ್ರ ಕೊಡಲಾಗಿದೆ.

**ಕಾರಕಗ್ರಹ :** ತ್ವಚೆರೋಗವಾಗಲು ಮುಖ್ಯ ಕಾರಣವೆಂದರೆ ರಕ್ತದಲ್ಲಿ ದೋಷವುಂಟಾಗುವದು. ಶರೀರದಲ್ಲಿ ಪ್ರಮಾಣ ಮೀರಿ ರಕ್ತ ಹೆಚ್ಚಾದರೆ ಅಥವಾ ಬೇರೆ ಬೇರೆ ದೋಷಗಳಿಂದ ರಕ್ತ ದೂಷಿತವಾದರೆ ಇಲ್ಲವೆ ಕ್ರಿಮಿಗಳಿಂದ ದೂಷಿತವಾದರೆ ಅಥವಾ ರಕ್ತವರ್ಧಕ ಪದಾರ್ಥಗಳಾದ ಮಾಂಸಾದಿಗಳನ್ನು ಹೆಚ್ಚಿಗೆ ತಿಂದರೆ ರಕ್ತ ಬೆಳೆಯುತ್ತದೆ. ಇದರಿಂದ ತ್ವಚೆ ರೋಗ ಬರುವ ಸಂಭವವಿದೆ. ಆದುದರಿಂದ ರಕ್ತದ ಕಾರಕಗ್ರಹಗಳಾದ ರವಿ-ಗುರು ಗ್ರಹಗಳೇ ಈ ರೋಗದ ಕಾರಕರು.

ರವಿ-ಗುರುಗಳ ತರುವಾಯ ಬುಧನೂ ಈ ರೋಗದ ಕಾರಕನು. ಏಕೆಂದರೆ ಬುಧನು ತ್ರಿದೋಷ ಕಾರಕನಿರುವನಲ್ಲದೆ ತ್ವಚೆಯ ಮೇಲೆ ಆಧಿಪತ್ಯ ಹೊಂದಿರುವನು.

ಬುಧನ ತರುವಾಯ ಚಂದ್ರನೂ ಈ ರೋಗದ ಕಾರಕನು. ಏಕೆಂದರೆ ತ್ವಚೆಯಲ್ಲಿ ಲಸನಾತ್ಮಕ ದ್ರವವನ್ನು ನಿರ್ಮಾಣಮಾಡುವ ಗುಣಧರ್ಮವು ಚಂದ್ರನಲ್ಲಿರುತ್ತದೆ.

**ಕಾರಕಸ್ಥಾನ** :— ತ್ವಚೆರೋಗವನ್ನು ನಿರ್ಮಾಣಮಾಡುವ ಕಾರಕ ಸ್ಥಾನಗಳೆಂದರೆ ತನುಸ್ಥಾನ ಮತ್ತು ಷಷ್ಠ-ದ್ವಾದಶ ಸ್ಥಾನಗಳು. ಆದುದರಿಂದ ಈ ಸ್ಥಾನಾಧೀಶರು ಮತ್ತು ಈ ಸ್ಥಾನಗಳು ದೂಷಿತವಿರದೆ ಯಾರಿಗೂ ಈ ವಿಕಾರ ಉಂಟಾಗಲಾರದು.

**ಕಾರಕಲಗ್ನ** : ರಕ್ತದ ಮೇಲೆ ಸಿಂಹ-ಕುಂಭ ರಾಶಿಗಳು ಆಧಿಪತಿ ಗಳಾಗಿರುತ್ತವೆ. ತ್ವಚೆಯ ಮೇಲೆ ಮಕರರಾಶಿಯ ಆಧಿಪತ್ಯವೂ ಇರುತ್ತದೆ. ಈ ಮೂರೂ ರಾಶಿಗಳು ದೂಷಿತವಿರದೆ ಯಾರಿಗೂ ತ್ವಚೆರೋಗಗಳು ಬರ ಲಾರವು. ಆದುದರಿಂದ ಕರ್ಕ, ಸಿಂಹ, ಕನ್ಯಾ, ಮಕರ, ಕುಂಭ, ಮೀನ, ಮಿಥುನ ಈ ಲಗ್ನದವರೇ ಹೆಚ್ಚಾಗಿ ಈ ರೋಗಗಳಿಂದ ಬಳಲುತ್ತಿರುವದು ಕಂಡುಬಂದಿದೆ.

**ರಾಶಿ** :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಪಿತ್ತ ಪ್ರಕೃತಿಯ, ಅಗ್ನಿರಾಶಿಯವರಾದ ಮೇಷ, ಸಿಂಹ, ಧನು ಈ ರಾಶಿಯವರಿಗೆ ರಕ್ತ ಬಹು ಬೇಗ ಕೆಡುವ ಸಂಭವವಿರುವದರಿಂದ ಚರ್ಮರೋಗದ ಭೀತಿ ಇವರಿಗೆ ಬಹಳ ವಿರುತ್ತದೆ.

ಅಗ್ನಿರಾಶಿಯವರ ನಂತರ ಕಫ ಪ್ರಕೃತಿಯ ಜಲರಾಶಿಯವರಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯವರಿಗೂ ತ್ವಚೆರೋಗದ ಭೀತಿ ಇರುತ್ತದೆ.

**ಯೋಗಗಳು** :

೧) ಕರ್ಕ, ವೃಶ್ಚಿಕ, ಮೀನ ಈ ಲಗ್ನಗಳಿದ್ದು, ಅಲ್ಲಿ ಪಾಪಗ್ರಹಗಳಿ

ದ್ದರೆ ಅಥವಾ ಪಾಪಗ್ರಹಗಳ ದೃಷ್ಟಿಯಿದ್ದರೆ ಅಥವಾ ವಿರುದ್ಧ ಗುಣಧರ್ಮದ ಗ್ರಹಗಳಿದ್ದರೆ ನಿಶ್ಚಿತವಾಗಿ ತ್ವಚೆರೋಗವು ಉಂಟಾಗುತ್ತದೆ.

೨) ಕುಂಭರಾಶಿಯು ತೃತೀಯ, ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನಗಳಲ್ಲಿದ್ದು, ವಿರುದ್ಧ ಗುಣಧರ್ಮದ ಗ್ರಹಗಳಿದ್ದರೆ ಅಂದರೆ ರವಿ, ಚಂದ್ರ, ಮಂಗಳ, ರಾಹು, ಗುರು ಈ ಗ್ರಹಗಳಿದ್ದರೆ ರಕ್ತ ದೂಷಿತವಾಗುತ್ತದೆ. ಮತ್ತು ಇಸಬು ಮೊದಲಾದ ತ್ವಚೆರೋಗಗಳುಂಟಾಗುತ್ತವೆ.

೩) ಕುಂಭಲಗ್ನವಿದ್ದು, ಲಗ್ನದಲ್ಲಿ ಗುರು, ಮಂಗಳ, ರವಿ, ರಾಹು ಈ ಗ್ರಹಗಳಲ್ಲಿ ಯಾವುದೇ ಗ್ರಹವು ಲಗ್ನದಲ್ಲಿದ್ದು, ಷಷ್ಠದಲ್ಲಿ ಶನಿ ಅಥವಾ ರಾಹು-ಮಂಗಳ, ಬುಧ ಯಾವದೇ ಒಂದು ಗ್ರಹವಿದ್ದರೂ ಇಸಬು ಉಂಟಾಗುತ್ತದೆ.

೪) ಮಕರ ರಾಶಿಯ ಚಂದ್ರ-ಶನಿ, ಗುರು-ಶನಿ ಇವರ ಯುತಿ ಯೋಗವು ಲಗ್ನ, ಷಷ್ಠ ದ್ವಾದಶದಲ್ಲಿದ್ದರೆ ತ್ವಚೆರೋಗವುಂಟಾಗುತ್ತದೆ.

೫) ಕುಂಭ, ಮೀನ, ಮೇಷ ಈ ರಾಶಿಗಳ ಗುರು-ರವಿ, ರವಿ-ಚಂದ್ರ, ಬುಧ-ಗುರು, ರವಿ-ಬುಧ, ಬುಧ-ಚಂದ್ರ ಇವರ ಯುತಿಯೋಗವು ಲಗ್ನ, ಷಷ್ಠ, ದ್ವಾದಶದಲ್ಲಿದ್ದರೆ ತ್ವಚೆರೋಗವುಂಟಾಗುತ್ತದೆ.

೬) ಮಕರರಾಶಿಯ ರವಿಯು ಕಂಡು ನಿರ್ಮಾಣಮಾಡಿದರೆ ಕುಂಭ ರಾಶಿಯ ರವಿಯು ರಕ್ತದೋಷವನ್ನುಂಟುಮಾಡುತ್ತಾನೆ.

೭) ಮಕರರಾಶಿಯ ಚಂದ್ರನು ತ್ವಚೆಯ ಕಿರುಕಳ ವಿಕಾರ (ಹುರುಕು, ಹುಣ್ಣು ಮೊದಲಾದ) ವನ್ನುಂಟುಮಾಡುವನು.

೮) ಮಕರ, ಕುಂಭ ರಾಶಿಗಳ ಬುಧನು ಲಗ್ನ, ಷಷ್ಠ, ದ್ವಾದಶದಲ್ಲಿದ್ದರೆ ತ್ವಚೆರೋಗ ನಿರ್ಮಾಣ ಮಾಡುವನು.

೯) ಕರ್ಕ, ವೃಶ್ಚಿಕ, ಮಕರ, ಕುಂಭ, ಮೀನ ಈ ರಾಶಿಗಳ ಮಂಗಳನು ಲಗ್ನ, ಷಷ್ಠ, ದ್ವಾದಶದಲ್ಲಿದ್ದು, ರವಿ, ಶನಿ, ರಾಹುಗಳೊಂದಿಗೆ ಅಶುಭ ಯೋಗ ಮಾಡುತ್ತಿದ್ದರೆ ತ್ವಚೆರೋಗವನ್ನುಂಟುಮಾಡುವನು.

೧೦) ಮಕರರಾಶಿಯ ಗುರುವು, ಮಂಗಳ ಇಲ್ಲವೆ ಬುಧ ಇಲ್ಲವೆ ರವಿಯೊಂದಿಗೆ ಲಗ್ನ, ಷಷ್ಠ, ದ್ವಾದಶದಲ್ಲಿದ್ದರೆ ಇಸಬು ಉಂಟುಮಾಡುವನು.

೧೧) ಜಲರಾಶಿಗಳು ಲಗ್ನ ಇಲ್ಲವೆ ಷಷ್ಠದಲ್ಲಿದ್ದು, ಅಲ್ಲಿ ವಿರುದ್ಧ ಗುಣಧರ್ಮದ ಗ್ರಹಗಳಿದ್ದರೆ ತ್ವಚೆರೋಗ ನಿರ್ಮಾಣವಾಗುತ್ತದೆ.

೧೨) ಚರರಾಶಿಗಳು ತ್ವಚೆರೋಗವನ್ನುಂಟುಮಾಡುತ್ತವೆ.

೧೩) ಜಲರಾಶಿಗಳು ಲಸನಾತ್ಮಕ ದ್ರವ್ಯವನ್ನು ಹೆಚ್ಚಿಸುತ್ತವೆ.

## ೫೯. ವ್ರಣಗಳು

ವ್ರಣಗಳಲ್ಲಿ ಶಾರೀರಿಕ, ಆಗಂತುಕ ಎಂಬ ಎರಡು ಪ್ರಕಾರಗಳಿವೆ. ವಾತಾದಿ ದೋಷಗಳು ದೇಹದಲ್ಲಿ ಸಂಚಿತವಾಗಿ ಅದರಿಂದಾಗುವ ವ್ರಣಗಳಿಗೆ "ಶಾರೀರಿಕ ವ್ರಣ" ವೆನ್ನುವರು. ಹೊರಗಿನ ಯಾವುದೇ ಕಾರಣದಿಂದ (ಉದಾ: ಶಸ್ತ್ರಾದಿ ಕ್ಷತದಿಂದ ಗಾಯವಾಗಿ ಅವುಗಳಿಂದ ವ್ರಣಗಳಾಗುವ ದಕ್ಕೆ, "ಆಗಂತುಕ ವ್ರಣ" ಗಳೆನ್ನುತ್ತಾರೆ.)

ನಾನಾ ಪ್ರಕಾರದ ಧಾರೆಯುಳ್ಳ, ಅನೇಕ ಪ್ರಕಾರದ ಬಾಯಿಯುಳ್ಳ ಶಸ್ತ್ರ ಆಯುಧ, ವಸ್ತುಗಳು ಹತ್ತುವದರಿಂದ, ಕಡಿಯುವಿಕೆ, ಜಜ್ಜುವಿಕೆ, ಕೊಯ್ಯುವಿಕೆ ಮೊದಲಾದ ಕಾರಣಗಳಿಂದ "ಸದ್ಯೋವ್ರಣ" ವಾಗುತ್ತದೆ. ಹೀಗೆ ವ್ರಣಗಳನ್ನು ವಿಂಗಡಿಸಬಹುದು. ಇನ್ನು ಜ್ಯೋತಿಷ್ಯದ ದೃಷ್ಟಿಯಿಂದ ವ್ರಣವುಂಟಾಗಲು ಕಾರಕಗ್ರಹ, ಸ್ಥಾನ, ರಾಶ್ಯಾದಿಗಳಾವವೆಂಬುದನ್ನು ಪರಿಶೀಲಿಸುವಾ:

**ಕಾರಕಗ್ರಹ**:– ಯಾವದೇ ಪ್ರಕಾರದ ವ್ರಣಗಳಲ್ಲಿ ಬಾವು, ಶೋಥ, ಹೊಡೆತ, ನೋವು, ಕೀವು ಸೋರುವಿಕೆ, ಉರಿಯುವಿಕೆ, ಬಿಗಿಯುವಿಕೆ, ಚುಚ್ಚುವಿಕೆ, ಸಳಿಯುವಿಕೆ, ವೇದನೆಯಾಗುವಿಕೆ, ತಿಂಡಿ–ತುರಿಕೆ, ದುರ್ಗಂಧ ಮೊದಲಾದ ಲಕ್ಷಣ ಹಾಗೂ ಭಾವನೆಗಳಿರುವ ಮೂಲಕ ಶನಿ, ಮಂಗಳ, ಚಂದ್ರರೇ ಕಾರಕರು.

**ಸ್ಥಾನ**:— ಶರೀರದ ಯಾವುದೇ ಭಾಗಕ್ಕಾದರೂ ವ್ರಣವಾಗುವವರಿಂದ ಜಾತಕದಲ್ಲಿ ನಿರ್ದಿಷ್ಟ ಸ್ಥಾನವೇ ವ್ರಣದ ಸ್ಥಾನವೆಂದು ಹೇಳಲು ಬಾರದು. ಆದರೆ ಬೇರೆ ಬೇರೆ ಗ್ರಹಗಳಿಂದ ದೇಹದ ಬೇರೆ ಬೇರೆ ಭಾಗಗಳಿಗೆ ವ್ರಣಗಳಾಗುವದರಿಂದ ಅವುಗಳ ವಿವರಣೆ ಈ ಕೆಳಗಿನಂತಿದೆ:

ಸೂರ್ಯನಿಂದ ತಲೆಯಲ್ಲಿಯೂ, ಚಂದ್ರನಿಂದ ಮುಖ-ಉದರದಲ್ಲಿಯೂ, ಅಂಗಾರಕನಿಂದ ಕಂಠದಲ್ಲಿಯೂ, ಬುಧನಿಂದ ನಾಭಿಯಲ್ಲಿಯೂ, ಗುರುವಿನಿಂದ ಮೂಗಿನಲ್ಲಿಯೂ ಶುಕ್ರನಿಂದ ಕಣ್ಣುಗಳಲ್ಲಿಯೂ, ಶನಿಯಿಂದ ಕಾಲುಗಳಲ್ಲಿಯೂ ರಾಹು-ಚಂದ್ರರಿಂದ ಹೊಟ್ಟೆಯಲ್ಲಿಯೂ ವ್ರಣಗಳಾಗುತ್ತವೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರಿಗೇ ವ್ರಣಗಳಾಗುತ್ತವೆ ಎಂದು ಹೇಳಲುಬಾರದು. ಅಥವಾ ನಿರ್ದಿಷ್ಟ ರಾಶಿಯು ಜಾತಕದಲ್ಲಿ ದೂಷಿತವಿದ್ದರೆ ವ್ರಣವಾಗುವದೆಂದು ಹೇಳಲೂ ಬಾರದು. ಶರೀರದ ಬೇರೆ ಬೇರೆ ಭಾಗಗಳಿಗೆ (ಅವಯವಗಳಿಗೆ) ವ್ರಣವುಂಟಾಗಲು ಬೇರೆ ಬೇರೆ ರಾಶಿಗಳು ದುಷ್ಟವಾದರೆ ಆಯಾ ಭಾಗಕ್ಕೆ ವ್ರಣವುಂಟಾಗುತ್ತದೆಂದು ಮಾತ್ರ ಹೇಳಲು ಬರುತ್ತದೆ. ಅವುಗಳ ವಿವರಣೆ ಈ ಕೆಳಗಿನಂತಿವೆ.

### ರಾಶಿಗಳಿಂದ ವ್ರಣ ಸ್ಥಾನಗಳು

ಮೇಷ-ಶಿರಸ್ಸು, ವೃಷಭ-ಮುಖ, ಮಿಥುನ-ಕಂಠ, ಕರ್ಕ-ಸ್ರೋತಸ್ಸುಗಳು, ಸಿಂಹ-ನಾಸಿಕ, ಕನ್ಯಾ-ಗುಹ್ಯ, ತುಲಾ-ಹಸ್ತ, ವೃಶ್ಚಿಕ-ಪಾರ್ಶ್ವ, ಧನು-ನೇತ್ರ, ಮಕರ-ಪಾದ, ಕುಂಭ-ಜಂಘಾ, ಮೀನ-ಕುಕ್ಷಿ, ಈ ಪ್ರಕಾರವಾಗಿ ರಾಶಿಗಳು ದೂಷಿತವಾದರೆ ಆಯಾ ಭಾಗಗಳಿಗೆ ವ್ರಣಗಳುಂಟಾಗುತ್ತವೆ.

**ಯೋಗಗಳು—**

೧) ಷಷ್ಠಾಧಿಪತಿಯು ಪಾಪಗ್ರಹವಾಗಿ ಲಗ್ನ, ಅಷ್ಟಮ, ಭಾಗ್ಯದಲ್ಲಿದ್ದ ಜಾತಕನು ವ್ರಣ ಪೀಡಿತನಾಗುವನು.

೨) ಷಷ್ಠಾಧಿಪತಿಯು ಪಾಪಗ್ರಹಯುತನಾಗಿ ಲಗ್ನ, ಅಷ್ಟಮ, ಈ ಸ್ಥಾನಗಳಲ್ಲಿದ್ದರೆ ವ್ರಣಗಳುಂಟಾಗುತ್ತವೆ.

## ೬೦ ಸ್ತ್ರೀ ರೋಗಗಳು

ಸೃಷ್ಟಿಯ ಪ್ರಾರಂಭದಿಂದಲೇ ಸ್ತ್ರೀ ಎಂದರೆ ಸಮಸ್ಯೆಯ ಮೂರ್ತಿ ಸ್ವರೂಪವೆಂದು ಸಿದ್ಧವಾಗಿದೆ. ಪ್ರಪ್ರಥಮವಾಗಿ ಸ್ತ್ರೀಯು-ಪುರುಷನಿಗೆ ಸಮಸ್ಯೆಯಿದ್ದಂತೆ ಜ್ಯೋತಿಷಿಗಳಿಗೂ, ವೈದ್ಯರಿಗೂ ಸಮಸ್ಯೆಯಾಗಿದ್ದಾಳೆ. ಇದಕ್ಕೆ ಅನೇಕ ಕಾರಣಗಳಿವೆ. ಸ್ತ್ರೀಯು ಒಂದು ವಿಶಿಷ್ಟ ಸೃಷ್ಟಿ. ಆಕೆಯ

ದೇಹರಚನೆ ಹೇಗೆ ವಿಶಿಷ್ಟವೋ ಹಾಗೆಯೇ ಆಕೆಯ ಆಗು-ಹೋಗು, ರೀತಿ-ನೀತಿ, ಆಚಾರ-ವಿಚಾರ, ನಡತೆ-ನಿಯಮಗಳು ಆಕೆಯ ಸಮಸ್ಯೆಗಳು ವಿಶಿಷ್ಟವಿರುತ್ತವೆ. ಅವುಗಳನ್ನು ಜ್ಯೋತಿಷಿಯು ಪರಿಶೀಲಿಸಿ ಪರಿಹಾರವನ್ನು ಸೂಚಿಸುವಂತೆ ವೈದ್ಯನೂ ಕೂಡ ಪರಿಶೀಲಿಸಿಯೇ ಪರಿಹಾರವನ್ನು ಸೂಚಿಸಬೇಕಾಗುತ್ತದೆ.

ರೋಗಗಳು ಎಲ್ಲರಿಗೂ ಬರುತ್ತವೆ. ಆದರೆ ನಮ್ಮ ಅನುಭವದ ಪ್ರಕಾರ ಕೆಲವು ರೋಗಗಳು ಲಿಂಗಭೇದವಿಲ್ಲದೆ ಅಂದರೆ ಸ್ತ್ರೀ-ಪುರುಷರೆಂಬ ಭೇದಭಾವರಹಿತವಾಗಿ ಎಲ್ಲರನ್ನೂ ಕಾಡಿದರೆ, ಕೆಲವು ರೋಗಗಳು ಪುರುಷರನ್ನು ಮಾತ್ರ ಕಾಡುತ್ತವೆ. ಉದಾಹರಣೆಗೆ ವೃಷಣವೃದ್ಧಿ ಮುಂತಾದವುಗಳು. ಹಾಗೆಯೇ ಕೆಲ ರೋಗಗಳು ಸ್ತ್ರೀಯರಿಗೆ ಮಾತ್ರ ಬರುತ್ತವೆ. ಉದಾ— ಆರ್ತವವಿಕಾರ, ಸ್ತನ್ಯವಿಕಾರ, ಬಾಣಂತಿ ಬೇನೆ ಮೊದಲಾದವುಗಳು. ಈ ಅಂಶವನ್ನು ಗಮನಿಸಿದಾಗ ಒಂದು ಸೂಕ್ಷ್ಮ ತತ್ತ್ವ ಪ್ರಕಟವಾಗುತ್ತದೆ. ಅದೇನಂದರೆ ಗ್ರಹಗಳಲ್ಲಿ ಪುರುಷ ಗ್ರಹಗಳು, ನಪುಂಸಕ ಗ್ರಹಗಳು, ಸ್ತ್ರೀ ಗ್ರಹಗಳು ಇರುವಂತೆ ಸ್ತ್ರೀಯರ ವಿಶಿಷ್ಟ ರೋಗಗಳಿಗೆ ಸ್ತ್ರೀ ಗ್ರಹಗಳಾದ ಶುಕ್ರ-ಚಂದ್ರರೇ ಕಾರಕರಾಗುತ್ತಾರೆ.

ಮತ್ತೊಂದು ವಿಷಯ: ಸ್ತ್ರೀರೋಗಗಳು ಪುರುಷರೋಗಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿರುವದರಿಂದ ಸ್ತ್ರೀರೋಗಿಗಳ ಸಂಖ್ಯೆಯು ಪುರುಷರೋಗಿಗಳ ಸಂಖ್ಯೆಗಿಂತ ಹೆಚ್ಚಾಗಿದೆ. ಇದು ಅನುಭವಸಿದ್ಧವಾದದ್ದು. ನಾನು ಹುಬ್ಬಳ್ಳಿಯಲ್ಲಿ ಆಯುರ್ವೇದ ಕಾಲೇಜಿನಲ್ಲಿ ಓದುತ್ತಿದ್ದಾಗ ಆಸ್ಪತ್ರೆಯ ಕೆಲಸ (Hospital duty) ಮಾಡುತ್ತಿದ್ದಾಗ ನಿರೀಕ್ಷಿಸಿದ ಅನುಭವವಿರುತ್ತದೆ. ವೈದ್ಯಚಿಕಿತ್ಸಾಲಯದಲ್ಲಿ (ರುಗ್ಣಾಲಯದಲ್ಲಿ) ಸ್ತ್ರೀರೋಗಿಗಳ ಸಂಖ್ಯೆ ಹೆಚ್ಚಾಗಿರುವದು ಕಂಡುಬಂದಿದೆ. ಸ್ತ್ರೀಯರಿಗಾಗಿಯೇ ಬರುವ ಕೆಲವು ವಿಶಿಷ್ಟ ರೋಗಗಳ ಹೊರತಾಗಿ ಸ್ತ್ರೀ-ಪುರುಷರಿಗಿರುವ ಸಾಮಾನ್ಯ ರೋಗಗಳೂ ಕೂಡ ಇವರನ್ನು ಕಾಡುತ್ತವೆ. ಆದ ದರಿಂದ ಸ್ತ್ರೀರೋಗಗಳ ವಿಷಯವಾಗಿ ಜ್ಯೋತಿಷ್ಯದ ಭಾಷ್ಯವೇನು, ಕಾರಕಗ್ರಹಗಳಾವವು, ಲಗ್ನ, ರಾಶಿ, ಸ್ಥಾನಾದಿಗಳು ಯಾವವು ಎಂಬುದರ ವಿಶ್ಲೇಷಣ ಮಾಡಿದರೆ ಪ್ರತ್ಯೇಕವಾದ ಪುಸ್ತಕ

ಬರೆಯುವಷ್ಟು ವಿವೇಚಿಸಬೇಕಾಗುತ್ತದೆ. ನಾವು ಶೀಘ್ರದಲ್ಲಿಯೇ "ಸ್ತ್ರೀ ರೋಗ ಜ್ಯೋತಿಷ್ಯ" ಎಂಬ ಪುಸ್ತಕವನ್ನು ಬರೆದು ಪ್ರಕಟಿಸುವವರಿದ್ದೇವೆ. ಪ್ರಸ್ತುತ ಗ್ರಂಥದ ಈ ಪ್ರಕರಣದಲ್ಲಿ ಆ ವಿಷಯವನ್ನು ಸ್ಥೂಲವಾಗಿ ವಿವರಿಸಲಾಗಿದೆ.

ಸ್ತ್ರೀ ರೋಗಗಳಿಗೆ ನಿರ್ದಿಷ್ಟವಾದ ಕಾರಕಗ್ರಹ, ಲಗ್ನ, ಸ್ಥಾನ, ರಾಶಿಗಳೆಂದು ಹೇಳುವದು ಕಷ್ಟಕರವಾಗಿದೆ. ಏಕೆಂದರೆ ಸ್ತ್ರೀರೋಗದಲ್ಲಿ ಅನೇಕ ಪ್ರಕಾರಗಳಿರುವದರಿಂದ ಈ ಭಿನ್ನ ಭಿನ್ನ ರೋಗಗಳಿಗೆ ಕಾರಕಗ್ರಹ, ಲಗ್ನ, ಸ್ಥಾನಾದಿಗಳು ಭಿನ್ನ ಭಿನ್ನವಿರುತ್ತವೆ. ಆದುದರಿಂದ ಮೊದಲು ಸ್ತ್ರೀರೋಗಗಳಲ್ಲಿಯ ಪ್ರಕಾರಗಳು ಯಾವವು ಎಂಬುದನ್ನು ಪರಿಶೀಲಿಸುವಾ.

## ಸ್ತ್ರೀರೋಗದಲ್ಲಿಯ ಪ್ರಕಾರಗಳು

ಸ್ತ್ರೀರೋಗಗಳು ಅನೇಕವಿದ್ದರೂ ಅವುಗಳನ್ನು ಸಂಕ್ಷಿಪ್ತವಾಗಿ ಮೂರು ರೀತಿಯಾಗಿ ವಿಂಗಡಿಸಬಹುದು. ೧) ಆರ್ತವ (ಮುಟ್ಟುದ್ರವ) ದೋಷ (ಆರ್ತವ ವಿಕಾರ) ೨) ಗರ್ಭಿಣಿ ವಿಕಾರಗಳು, ೩) ಬಾಣಂತಿಬೇನೆ (ಸೂತಿಕಾ ವಿಕಾರಗಳು). ಈ ಮೂರೂ ವರ್ಗದ ರೋಗಗಳನ್ನು ಪ್ರತ್ಯೇಕವಾಗಿ ವಿವೇಚಿಸೋಣ:

### ಆರ್ತವದೋಷ

ಈ ಆರ್ತವದೋಷದಲ್ಲಿಯೂ ಸಹ ಅನೇಕ ಪ್ರಕಾರಗಳುಂಟು.

(ಅ) ಅತ್ಯಾರ್ತವ (Menorrhagia)

(ಬ) ಅನಾರ್ತವ (Amenorrhoea)

(ಕ) ಕಷ್ಟಾರ್ತವ ಅಥವಾ ಪೀಡಾರ್ತವ

(ಡ) ಶ್ವೇತಪ್ರದರ Lucorrhoea

ಇವೇ ಮೊದಲಾದವುಗಳು ಸ್ತ್ರೀಯರ ಮುಟ್ಟುದೋಷದ ವಿಷಯವಾಗಿರುವ ರೋಗಗಳಿರುತ್ತವೆ.

**ಕಾರಕಗ್ರಹ:**— ಮುಟ್ಟು ದೋಷದ (ಆರ್ತವದೋಷದ) ಯಾವತ್ತೂ ವಿಕಾರಗಳಿಗೆ ಶುಕ್ರನೇ ಕಾರಕನು. ಶುಕ್ರನು ದೂಷಿತನಿರದೆ ಯಾವ ಸ್ತ್ರೀಯರಿಗೂ ಆರ್ತವವಿಕಾರವುಂಟಾಗಲಾರದು. ಆದರೆ ಅತ್ಯಾರ್ತವ ಹಾಗೂ ಕಷ್ಟಾರ್ತವಗಳಿಗೆ ಶುಕ್ರನ ಹೊರತಾಗಿ ಮಂಗಳನನ್ನೂ ಪರಿಶೀಲಿಸಬೇಕು. ಏಕೆಂದರೆ ಅಧೋಗತರ ರಕ್ತಪಿತ್ತದ ಕಾರಣದಿಂದಲೂ ಅತ್ಯಾರ್ತವವಾಗುವ ಸಂಭವವಿರುತ್ತದೆ. ಆದುದರಿಂದ ಅತ್ಯಾರ್ತವ ಹಾಗೂ ಕಷ್ಟಾರ್ತವ ವಿಕಾರಗಳಿಗೆ ಶುಕ್ರ, ಮಂಗಳರೇ ಕಾರಕರು.

ಅನಾರ್ತವ ಹಾಗೂ ಶ್ವೇತಪ್ರದರ ವಿಕಾರಗಳಿಗೆ ಶುಕ್ರನ ಸಂಗಡ ಚಂದ್ರನನ್ನೂ ಪರಿಶೀಲಿಸಬೇಕು. ಚಂದ್ರನು ದೂಷಿತನಿರದೆ ಯಾರಿಗೂ ಶ್ವೇತಪ್ರದರ ಉಂಟಾಗಲಾರದು.

**ಲಗ್ನ:**- ಯೋನಿಯ ಸ್ಥಾನದ ಮೇಲೆ ವೃಶ್ಚಿಕರಾಶಿಯ ಆಧಿಪತ್ಯವಿರುವದರಿಂದ ಆರ್ತವ ದೋಷಗಳು ವೃಶ್ಚಿಕ ರಾಶಿಯು ದೂಷಿತವಿರದೆ ಉಂಟಾಗಲಾರವು. ಆದುದರಿಂದ ಮೇಷ, ವೃಷಭ, ಮಿಥುನ, ಕರ್ಕ, ವೃಶ್ಚಿಕ, ಧನು ಈ ಲಗ್ನದವರೇ ಹೆಚ್ಚಾಗಿ ಆರ್ತವದೋಷದಿಂದ ಬಳಲುತ್ತಿರುವದು ಕಂಡುಬಂದಿದೆ.

**ಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಯೋನಿಯ ಸ್ಥಾನವಾದ ಅಷ್ಟಮಸ್ಥಾನವೇ ಈ ರೋಗದ ಕಾರಕಸ್ಥಾನವು.

ಅಷ್ಟಮಸ್ಥಾನದ ನಂತರ ಸಪ್ತಮ ಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಸಪ್ತಮಸ್ಥಾನವಿದು ವೈವಾಹಿಕ ಜೀವನದ ಸೌಖ್ಯಸ್ಥಾನವಿರುವದಲ್ಲದೆ ಇಂದ್ರಿಯಜನ್ಯ ಸುಖದ ಸ್ಥಾನವೂ ಇರುತ್ತದೆ. ವೈವಾಹಿಕ ಜೀವನ ಸರಿಯಾಗಿಲ್ಲದಿದ್ದರೆ ಆರ್ತವವಿಕಾರವುಂಟಾಗುತ್ತದೆ. ಆದುದರಿಂದ ಅಷ್ಟಮ-ಸಪ್ತಮ ಸ್ಥಾನಗಳು ಮತ್ತು ಈ ಸ್ಥಾನಾಧೀಶರು ದೂಷಿತರಿರದೆ ಯಾರಿಗೂ ಆರ್ತವವಿಕಾರವುಂಟಾಗಲಾರದು.

**ಗರ್ಭ ವಿಕಾರಗಳು:** ಗರ್ಭ ವಿಕಾರಗಳಲ್ಲಿಯೂ ಸಹ ಅನೇಕ ಪ್ರಕಾರಗಳುಂಟು. (ಅ) ಪ್ರಾತರ್ವಮನ, (ಬ) ಗರ್ಭಿಣಿ ಪಾಂಡು,

ಕ) ಗರ್ಭಿಣಿ ಅಪಸ್ಮಾರ, ಡ) ಗರ್ಭಸ್ರಾವ–ಗರ್ಭಪಾತ, ಅಕಾಲಿಕ ಪ್ರಸವ (Abortion, Misscarriage).

**ಕಾರಕಗ್ರಹ :—** ಗರ್ಭಿಣಿ ವಿಕಾರಗಳಿಗೆ ಅನೇಕ ಗ್ರಹಗಳು ಕಾರಕವಿರುತ್ತವೆ. ಗರ್ಭಸ್ರಾವ, ಗರ್ಭಪಾತ, ಅಕಾಲಿಕ ಪ್ರಸವ ಈ ವಿಕಾರಗಳಿಗೆ ರಾಹು, ಶನಿಯರು ಕಾರಕರಿರುತ್ತಾರೆ. ಗರ್ಭಿಣಿ ಅಪಸ್ಮಾರಗಳಿಗೆ ಬುಧ, ಚಂದ್ರ, ಶನಿಯರು ಕಾರಕರಿರುತ್ತಾರೆ. ಗರ್ಭಿಣಿ ಪಾಂಡುವಿಗೆ ರವಿ–ಮಂಗಳರು ಕಾರಕರಿರುತ್ತಾರೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮ, ಅಷ್ಟಮ ಸ್ಥಾನಗಳೇ ಈ ವಿಕಾರದ ಕಾರಕಸ್ಥಾನಗಳು.

**ಲಗ್ನ :—** ಮೇಷ, ವೃಷಭ, ಕರ್ಕ, ಸಿಂಹ, ಧನು, ಕುಂಭ, ಮಿಥುನ, ಈ ಲಗ್ನದವರೇ ಈ ರೋಗದಿಂದ ಬಳಲುವದು ಕಂಡುಬಂದಿದೆ.

## ಬಾಣಂತಿ ಬೇನೆಗಳು (Puerperal diseases)
### (ಸೂತಿಕಾ ವಿಕಾರಗಳು)

ಈ ಸೂತಿಕಾ ವಿಕಾರಗಳಲ್ಲಿ ಸಹ ಅನೇಕ ಪ್ರಕಾರಗಳಿವೆ. ಅ) ಕ್ಷಯ ಬ) ಪಾಂಡು ಕ) ಉನ್ಮಾದ ಡ) ಸ್ತನರೋಗ ಇ) ಸ್ತನ್ಯರೋಗ ಫ) ದುಗ್ಧ ಜ್ವರ ಇವೇ ಮೊದಲಾದವುಗಳು ಬಾಣಂತಿ ವಿಕಾರಗಳಿರುತ್ತವೆ.

**ಕಾರಕಗ್ರಹ :—** ಸೂತಿಕಾ ವಿಕಾರಗಳಿಗೆ ಶುಕ್ರನಿಗಿಂತ ಚಂದ್ರನೇ ಹೆಚ್ಚು ಕಾರಕಗ್ರಹನಿರುವನು. ಏಕೆಂದರೆ ಸ್ತನರೋಗ, ಸ್ತನ್ಯರೋಗ, ದುಗ್ಧ ಜ್ವರ, ಉನ್ಮಾದ, ಕ್ಷಯ, ಪಾಂಡು ಈ ಎಲ್ಲ ವಿಕಾರಗಳ ಕಾರಕಗ್ರಹವೆಂದರೆ ಚಂದ್ರನೇ ಇರುವನು. ಆದುದರಿಂದ ಚಂದ್ರನು ದೂಷಿತನಿರದೆ ಯಾವ ಸ್ತ್ರೀಗೂ ಬಾಣಂತಿ ಬೇನೆ ಬರಲಾರದು.

**ಲಗ್ನ :—** ದುಗ್ಧಜ್ವರ, ಸ್ತನರೋಗ ಹಾಗೂ ಸ್ತನ್ಯರೋಗಗಳಿಗೆಲ್ಲ ಕರ್ಕ ರಾಶಿಯು ಕಾರಕವಿರುತ್ತವೆ. ಕರ್ಕರಾಶಿ ದೂಷಿತವಿರದೆ ಯಾವ ಸ್ತ್ರೀಗೂ ಈ ವಿಕಾರ ಉಂಟಾಗಲಾರವು. ಆದುದರಿಂದ ಮೇಷ, ಸಿಂಹ,

ಧನು, ಕುಂಭ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬಂದಿದೆ. ಪಾಂಡು, ಕ್ಷಯ, ಉನ್ಮಾದಗಳನ್ನು ಸ್ವತಂತ್ರ ರೋಗ ಎಂದು ಪರಿಶಿಲಿಸಬೇಕು.

**ಸ್ಥಾನ:—** ದುಗ್ಧಜ್ವರ, ಸ್ತನ–ಸ್ತನ್ಯರೋಗಗಳು, ಕ್ಷಯ, ಉನ್ಮಾದಗಳಿಗೆಲ್ಲ ಚತುರ್ಥ ಸ್ಥಾನವೇ ಕಾರಕವಿರುವಪರಿಂದ ಈ ಎಲ್ಲ ರೋಗಗಳಿಗೂ ಚತುರ್ಥ ಸ್ಥಾನವೇ ಕಾರಕವಿರುತ್ತದೆ. ಆದುದರಿಂದ ಚತುರ್ಥಸ್ಥಾನ, ಚತುರ್ಥೇಶ ದೂಷಿತವಿರದೆ ಯಾರಿಗೂ ಈ ರೋಗವು ಬರಲಾರದು.

## ಸ್ತ್ರೀ ರೋಗಗಳ ಯೋಗಗಳು

೧) ಜಾತಕದಲ್ಲಿ ಚಂದ್ರನು ಪೃಥ್ವಿ ಇಲ್ಲವೆ ಅಗ್ನಿರಾಶಿಯವನಾಗಿ ಪಂಚಮ, ಸಪ್ತಮ, ಅಷ್ಟಮದಲ್ಲಿದ್ದು, ಮಂಗಳನೊಂದಿಗೆ ಯುತಿಯೋಗ, ಪ್ರತಿಯೋಗ, ದೃಷ್ಟಿಯೋಗಗಳಿದ್ದರೆ ರಜೋದರ್ಶನವು ನಿಯಮಿತವಾಗಿ ಆಗುತ್ತದೆ. ಅಂದರೆ ೨೬,೨೭ ದಿವಸಕ್ಕೆ ಸರಿಯಾಗಿ ಆಗುತ್ತದೆ.

೨) ಚಂದ್ರನು ವಾಯುರಾಶಿಯವನಾಗಿದ್ದರೆ ಇಂಥ ಸ್ತ್ರೀಯರ ಮಾಸಿಕಸ್ರಾವವು ಅನಿಯಮಿತವಾಗುತ್ತದೆ. ಹಾಗೂ ಸ್ರಾವದ ಪ್ರಮಾಣವು ಕಡಿಮೆ ಇರುತ್ತದೆ.

೩) ಶನಿ, ರಾಹು, ಮಂಗಳ, ಕ್ಷೀಣ ಚಂದ್ರ ಇವರು ಅಷ್ಟಮ, ಸಪ್ತಮದಲ್ಲಿದ್ದರೆ ಆರ್ತವವಿಕಾರವುಂಟಾಗುತ್ತದೆ. ಇವೇ ಗ್ರಹಗಳು ಪಂಚಮ–ಲಾಭದಲ್ಲಿದ್ದರೆ ಗರ್ಭಾಶಯ ಸಂಬಂಧದ ವಿಕಾರಗಳು ಉಂಟಾಗುತ್ತವೆ.

೪) ಸ್ತ್ರೀಯರ ಜಾತಕದಲ್ಲಿ ಶುಕ್ರ–ಮಂಗಳರ ಯುತಿಯೋಗವು ಲಗ್ನ, ಪಂಚಮ, ದ್ವಾದಶ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ಅಥವಾ ಶುಕ್ರ–ಮಂಗಳರ ಪ್ರತಿಯೋಗವು ಲಗ್ನ–ಸಪ್ತಮ, ಪಂಚಮ–ಲಾಭ ಅಷ್ಟಮ–ದ್ವಿತೀಯ, ಷಷ್ಠ–ದ್ವಾದಶ ಈ ಸ್ಥಾನಗಳಲ್ಲಿದ್ದರೂ ಸಹ ಪೀಡಾರ್ತವ ಅಥವಾ ಕಷ್ಟಾರ್ತವ ಉಂಟಾಗುತ್ತದೆ.

೫) ಶುಕ್ರ–ರಾಹುವಿನ ಯುತಿಯೋಗವು ಪಂಚಮ, ಷಷ್ಠ, ಸಪ್ತಮ, ಅಷ್ಟಮ ಈ ಯಾವುದೇ ಸ್ಥಾನದಲ್ಲಿದ್ದರೆ ಇಂಥ ಸ್ತ್ರೀಯರಿಗೆ ಯಾವುದೇ ಮುಟ್ಟುದೋಷದ ಪ್ರಕಾರವಿದ್ದೇ ಇರುತ್ತದೆ.

೬) ವಿಷಮರಾಶಿಯ ಶುಕ್ರನು ಪಂಚಮ ಇಲ್ಲವೆ ಅಷ್ಟಮದಲ್ಲಿದ್ದರೆ ಮುಟ್ಟಾಗುವ ಕಾಲಕ್ಕೆ ಹೊಟ್ಟೆಶೂಲೆ, ಹೊಟ್ಟೆನೋವು ಉಂಟಾಗುತ್ತದೆ.

೭) ವೃಶ್ಚಿಕ ರಾಶಿಯ ರವಿಯು ಪಂಚಮ, ಸಪ್ತಮ, ಅಷ್ಟಮ ಈ ಯಾವ ಸ್ಥಾನದಲ್ಲಿದ್ದರೂ ಸ್ತ್ರೀವಿಕಾರವಾಗಲಾರದು.

೮) ವೃಶ್ಚಿಕರಾಶಿಯ ಚಂದ್ರನು ಪಂಚಮ, ಷಷ್ಠ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ಮೂತ್ರಾಶಯ ವಿಕಾರವನ್ನು ಉಂಟುಮಾಡುತ್ತಾನೆ.

೯) ವೃಶ್ಚಿಕ ರಾಶಿಯ ಮಂಗಳನು ಒಬ್ಬನೇ ಪಂಚಮ, ಷಷ್ಠ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ಯಾವ ವಿಕಾರವನ್ನುಂಟುಮಾಡಲಾರನು. ಆದರೆ ಅದೇ ಮಂಗಳನು ಶುಕ್ರ, ಚಂದ್ರ, ಶನಿ ರಾಹುಗಳೊಂದಿಗಿದ್ದರೆ ಉಪದಂಶ, ಜನನೇಂದ್ರಿಯದಲ್ಲಿ ವ್ರಣ, ಮೂತ್ರಾಶಯದಲ್ಲಿ ದೋಷ ಹೆಚ್ಚು ಸ್ರಾವ, ಗರ್ಭಾಶಯದಲ್ಲಿ ದೋಷ, ಅತಿವೇದನೆ, ಯೋನಿಮಾರ್ಗದಲ್ಲಿ ದಾಹ ಮೊದಲಾದ ವಿಕಾರಗಳನ್ನು ಮಾಡುವನು.

೧೦) ವೃಶ್ಚಿಕ ರಾಶಿಯ ಗುರುವು ಷಷ್ಠ, ಸಪ್ತಮ ಅಷ್ಟಮ, ದ್ವಾದಶದಲ್ಲಿದ್ದರೆ ಸ್ತ್ರೀರೋಗವನ್ನುಂಟುಮಾಡುವನು.

೧೧) ವೃಶ್ಚಿಕರಾಶಿಯ ಶುಕ್ರನು ಪಂಚಮ, ಷಷ್ಠ, ಸಪ್ತಮ, ಅಷ್ಟಮ, ಲಗ್ನ, ದ್ವಾದಶ ಈ ಸ್ಥಾನಗಳಲ್ಲಿ ಮಂಗಳನೊಂದಿಗೆ ಇದ್ದರೆ ಉಪದಂಶ, ಮೂತ್ರವಿಕಾರರೇತದ (Seminal), ಸಂಬಂಧ–ಬೀಜದ ಸಂಬಂಧ ದೋಷಗಳನ್ನು ಕೊಡುವನು. ಮೂತ್ರ ಮಾರ್ಗದಲ್ಲಿ ಬಾವು, ಹುಣ್ಣು ಹಾಗೂ ಮೂತ್ರದಲ್ಲಿ ಹೆಚ್ಚು ಕ್ಷಾರ ಈ ಮೊದಲಾದ ವಿಕಾರಗಳನ್ನು ಕೊಡುವನು.

೧೨) ವೃಶ್ಚಿಕ ರಾಶಿಯ ಶನಿಯು ಅಷ್ಟಮದಲ್ಲಿದ್ದರೆ ಸಳಿಯಿಂದ ಮೂತ್ರವನ್ನು ಹೊರತೆಗೆಯಬೇಕಾಗುತ್ತದೆ. ಅದೇ ಶನಿಯು ಲಗ್ನ ಪಂಚಮ, ಸಪ್ತಮಗಳಲ್ಲಿದ್ದರೆ ಗರ್ಭಾಶಯದ ದೋಷವನ್ನು ಕೊಡುವನು.

೧೩) ಜಲರಾಶಿಯ ಶುಕ್ರನು ಪಾಪಗ್ರಹಯುಕ್ತನಾಗಿ ಲಗ್ನ, ಪಂಚಮ, ಷಷ್ಠ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ಶ್ವೇತಪ್ರದರವನ್ನು ಉಂಟುಮಾಡುವನು.

೧೪) ಅಗ್ನಿರಾಶಿಯ ಇಲ್ಲವೆ ವೃಶ್ಚಿಕರಾಶಿಯ ಶುಕ್ರನು ಪಾಪಗ್ರಹ ಯುಕ್ತನಾಗಿ ಷಷ್ಠ, ಲಗ್ನ, ಪಂಚಮ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ರಕ್ತಪ್ರದರವನ್ನುಂಟುಮಾಡುವದು.

೧೫) ಯಾವದೇ ಸ್ತ್ರೀಯ ಜಲರಾಶಿಯ ಮಂಗಳನು ಚತುರ್ಥ, ಅಷ್ಟಮ, ದ್ವಾದಶ ಈ ಸ್ಥಾನದಲ್ಲಿದ್ದರೆ ಇಂಥ ಸ್ತ್ರೀಯರ ಮಾಸಿಕ ಸ್ರಾವವು ಹೆಚ್ಚು ಇರುತ್ತದೆ.

೧೬) ಜಲರಾಶಿಯ ಮಂಗಳ-ಬುಧರು ಅಥವಾ ಅಗ್ನಿ ರಾಶಿಯ ಮಂಗಳ-ಬುಧರ ಯುತಿಯೋಗವು ಪಂಚಮ, ಷಷ್ಠ, ಅಷ್ಟಮ, ಸಪ್ತಮದಲ್ಲಿದ್ದರೆ ಶ್ವೇತಪ್ರದರ, ರಕ್ತಪ್ರದರಗಳುಂಟಾಗುತ್ತವೆ.

೧೭) ಚಂದ್ರ-ಮಂಗಳರ ಯುತಿಯೋಗವು ಲಗ್ನ, ಪಂಚಮ, ಸಪ್ತಮ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ಸ್ತ್ರೀಯರ ಮಾಸಿಕ ಸ್ರಾವ ಹೆಚ್ಚು.

೧೮) ವೃಶ್ಚಿಕರಾಶಿಯ ಶುಕ್ರ-ಮಂಗಳರ ಯುತಿಯೋಗವು ಲಗ್ನ, ಪಂಚಮ, ಸಪ್ತಮ, ಅಷ್ಟಮಸ್ಥಾನಗಳಲ್ಲಿದ್ದರೆ ಪ್ರಸವ ಕಾಲಕ್ಕೆ ರಕ್ತಸ್ರಾವ ಬಹಳವಾಗುತ್ತದೆ.

೧೯) ಶುಕ್ರ-ರಾಹು, ಚಂದ್ರ-ರಾಹು, ಶನಿ-ರಾಹು, ಶನಿ-ಚಂದ್ರ ಇವರ ಯುತಿಯೋಗವು ಪಂಚಮ-ಲಾಭದಲ್ಲಿದ್ದರೆ ಗರ್ಭಸ್ರಾವ, ಗರ್ಭಪಾತ, ಅಕಾಲಿಕ ಪ್ರಸೂಪಗಳ ಭೀತಿ ಬಹಳ.

೨೦) ಚಂದ್ರನು ದೂಷಿತನಿದ್ದರೆ ಸೂತಿಕಾ ರೋಗವನ್ನು ಕೊಡುವನು.

೨೧) ಚಂದ್ರನು ಪಾಪಗ್ರಹಮಧ್ಯ, ಪಾಪಗ್ರಹಯುಕ್ತನಾಗಿ ಷಷ್ಠ, ಅಷ್ಟಮ, ದ್ವಾದಶದಲ್ಲಿದ್ದರೆ ಸೂತಿಕಾರೋಗವನ್ನು ಕೊಡುವನು.

೨೨) ಮಿಥುನ, ತುಲಾ, ಕುಂಭ, ವೃಷಭ, ಕನ್ಯಾ, ಕರ್ಕ, ಮೀನ ಈ ರಾಶಿಗಳ ಚಂದ್ರ-ಶನಿಯರ ಯುತಿಯು ಲಗ್ನ-ಚತುರ್ಥದಲ್ಲಿದ್ದರೆ ಬಾಣಂತೀಬೇನೆ ತರುವನು.

೨೩) ಕರ್ಕರಾಶಿಯ ರಾಹು, ಶನಿ, ಬುಧರು ಚತುರ್ಥ ಇಲ್ಲವೆ ದಶಮದಲ್ಲಿದ್ದರೂ ಸೂತಿಕಾರೋಗವನ್ನು ಕೊಡುವನು.

೨೪) ಶನಿ-ಮಂಗಳ, ಶನಿ-ರಾಹು, ರಾಹು-ಮಂಗಳ, ಚಂದ್ರ-ರಾಹು ಇವರ ಯುತಿಯೋಗವು ಪಂಚಮ-ಲಾಭದಲ್ಲಿದ್ದರೆ ಗರ್ಭಿಣಿ ವಿಕಾರ ವಾಗುವದು. ಇವೇ ಗ್ರಹಗಳ ಪ್ರತಿಯೋಗವು ಲಾಭ-ಪಂಚಮ, ಇಲ್ಲವೆ ದ್ವಿತೀಯಅಷ್ಟಮದಲ್ಲಿದ್ದರೂ ಗರ್ಭಿಣಿವಿಕಾರವಾಗುವದು.

೨೫) ಪೃಥ್ವಿ ಇಲ್ಲವೆ ಜಲರಾಶಿಯ ರಾಹು ಅಥವಾ ಶನಿಯು ಪಂಚಮಸ್ಥಾನದಲ್ಲಿದ್ದರೆ ಗರ್ಭಸ್ರಾವ, ಗರ್ಭಪಾತ, ಅಕಾಲಿಕ ಪ್ರಸವ ಆಗುವದು.

೨೬) ಅಷ್ಟಮೇಶ, ಸಪ್ತಮೇಶ, ಪಂಚಮೇಶನಾದ ಗುರುವು ದೂಷಿತನಾಗಿದ್ದರೆ ಶ್ವೇತಪ್ರದರವನ್ನುಂಟುಮಾಡುವನು.

---

# ೫

# ಅನುಭವಸಿದ್ಧ ನಿಯಮಗಳು

ಆರೋಗ್ಯ-ಜ್ಯೋತಿಷ್ಯಗಳ ಪರಸ್ಪರ ಸಂಬಂಧದ ನಿರೂಪಣೆಯನ್ನು ಈಗಾಗಲೇ ನಾಲ್ಕು ಅಧ್ಯಾಯಗಳಲ್ಲಿ ಮಾಡಲಾಗಿದೆ. ಈ ಅಧ್ಯಾಯದಲ್ಲಿ ನನ್ನ ವೃತ್ತಿಯಲ್ಲಿ ಕಳೆದ ೩೫ ವರ್ಷಗಳ ಅನುಭವದಲ್ಲಿ ಸಿದ್ಧವಾದ ವೈಶಿಷ್ಟ್ಯಪೂರ್ವಕ ಕೆಲವು ಅನುಭವಗಳನ್ನು ಕ್ರೋಢೀಕರಿಸಿ "ಅನುಭವಸಿದ್ಧ ನಿಯಮಗಳು" ಎಂದು ರೂಪಿಸಿದ್ದೇನೆ. ವೃತ್ತಿಬಾಂಧವರಿಗೆ ಈ ಅಧ್ಯಾಯ ಬಹಳ ಅಮೂಲ್ಯವಾಗಿದ್ದಂತೆಯೇ ಜ್ಯೋತಿಷ್ಯದ ಪ್ರಾಥಮಿಕ ಜ್ಞಾನವಿರುವ ಪೃಚ್ಛಕರಿಗೂ, ಓದುಗರಿಗೂ ಈ ನಿಯಮಗಳು ಪ್ರಯೋಜನಕಾರಿಯಾಗುವುದರಲ್ಲಿ ಸಂದೇಹವಿಲ್ಲ.

೧) ರೋಗಿಯ ರೋಗದ ಉಲ್ಬಣತೆ, ತೀವ್ರತೆ, ಉದ್ವಿಗ್ನತೆಯು ಯಾವುದೇ ತಿಂಗಳ ಕೃಷ್ಣ ದಶಮಿಯಿಂದ ಶುದ್ಧ ಪಂಚಮಿಯವರೆಗೆ ಹೆಚ್ಚು ಇರುತ್ತದೆ. ಅದರಲ್ಲಿಯೂ ಕೃಷ್ಣಚತುರ್ದಶಿ ಮತ್ತು ಅಮಾವಾಸ್ಯೆಯ ದಿನ ತೀವ್ರವಿರುತ್ತದೆ.

೨) ರೋಗದ ತೀವ್ರತೆ ಯಾವಾಗಲೂ ರಾತ್ರಿಯ ಕಾಲದಲ್ಲಿ ಹೆಚ್ಚಾಗಿದ್ದು, ಸೂರ್ಯೋದಯದ ನಂತರ ಕಡಿಮೆಯಿರುತ್ತದೆ.

೩) ಭರಣಿ, ಕೃತ್ತಿಕಾ, ಆರಿದ್ರ, ಆಶ್ಲೇಷ, ಮಘಾ, ಮೂಲಾ ಈ ಆರು ನಕ್ಷತ್ರಗಳಲ್ಲಿ ಸರ್ಪ ಕಚ್ಚಿದರೆ ಸಾವು ಸಂಭವಿಸುತ್ತದೆ.

೪) ಸ್ಮಶಾನ, ದೇವಾಲಯ, ಅಶ್ವತ್ಥವೃಕ್ಷದ ಸಾಮೀಪ್ಯ ಹುತ್ತದ ಸಾಮೀಪ್ಯ ಈ ಯಾವುದೊಂದು ಸ್ಥಳದಲ್ಲಿ ಸಂಧ್ಯಾಕಾಲದಲ್ಲಿ ಸರ್ಪ ಕಚ್ಚಿದರೆ ಸಾವು ಸಂಭವಿಸುತ್ತದೆ.

೫) ದ್ವಾದಶಸ್ಥಾನ ಹಾಗೂ ದ್ವಾದಶೇಶ ದೂಷಿತರಿದ್ದ (ದುರ್ಬಲರಿದ್ದ) ಜಾತಕನು (ರೋಗಿಯು) ರುಗ್ಣಾಲಯದಲ್ಲಿ (ದವಾಖಾನೆ) ಬಹು ದಿನಗಳ ವರೆಗೆ ಇರಬೇಕಾಗುತ್ತದೆ.

೬) ಷಷ್ಠಸ್ಥಾನ ಹಾಗೂ ಷಷ್ಠೇಶ ಬಲಾಢ್ಯನಿದ್ದ ಜಾತಕನಿಗೆ ದೀರ್ಘಾವಧಿ ರೋಗಗಳ ಉಪದ್ರವ ಕಡಿಮೆ ಹಾಗೂ ಇಂಥ ಜಾತಕನು ರುಗ್ಣಾಲಯದಲ್ಲಿ ಬಹುದಿನಗಳವರೆಗೆ ಇರಲಾರನು.

೭) ಮೇಷ, ಸಿಂಹ, ಧನು ಈ ಲಗ್ನಗಳ ಜಾತಕನಿಗೆ ರೋಗದ ಪ್ರತೀಕಾರಕ ಶಕ್ತಿ ಹೆಚ್ಚು ಇರುತ್ತದೆ.

೮) ಮಿಥುನ, ತುಲಾ, ಕುಂಭ ಈ ಲಗ್ನದ ಜಾತಕರ ಪ್ರಕೃತಿ ಉತ್ತಮವಿರುತ್ತದೆ.

೯) ಕರ್ಕ, ವೃಶ್ಚಿಕ, ಮೀನ ಈ ಲಗ್ನದ ಜಾತಕದವರಿಗೆ ಹಾಗೂ ಈ ರಾಶಿಯ ಜನರಿಗೆ ಸಾಂಸರ್ಗಿಕ ರೋಗಗಳು ತೀವ್ರ ಬಾಧಿಸುತ್ತವೆ.

೧೦) ವೃಷಭ, ಕನ್ಯಾ, ಮಕರ ಈ ಲಗ್ನದ ಜನರ ಶರೀರ ಪ್ರಕೃತಿ ಉತ್ತಮವಿರುತ್ತದೆ. ಆದರೆ ತ್ವಚೆ ರೋಗ, ಶಸ್ತ್ರ ಚಿಕಿತ್ಸೆ, ಮಾನಸಿಕರೋಗ ಬಹಳ.

೧೧) ವೃಷಭ, ಮಿಥುನ, ಕರ್ಕ, ಕನ್ಯಾ, ಮೀನ ಈ ರಾಶಿಗಳ ಜನರಿಗೆ ಮಾನಸಿಕ ರೋಗಗಳು (ಹಿಸ್ಟೇರಿಯಾ, ಉನ್ಮಾದ) ಹೆಚ್ಚು ಬಾಧಿಸುತ್ತದೆ.

೧೨) ಕರ್ಕ, ವೃಶ್ಚಿಕ, ಮಕರ, ಮೀನ, ವೃಷಭ, ಕನ್ಯಾ ಈ ರಾಶಿಯ ಜನರಿಗೆ ಕಾಸ (ಕೆಮ್ಮು), ಶ್ವಾಸ (ದಮ್ಮು), ಪ್ರತಿಶಾಯ (ನೆಗಡಿ)— ಈ ವಿಕಾರಗಳು ಮೇಲಿಂದ ಮೇಲೆ ಬಾಧಿಸುತ್ತವೆ.

೧೩) ಲಗ್ನೇಶ, ಷಷ್ಠೇಶ, ರವಿ, ಚಂದ್ರ ಈ ನಾಲ್ಕು ಗ್ರಹಗಳು ದುರ್ಬಲವಿದ್ದ ಜಾತಕನಿಗೆ ರುಗ್ಣಾಲಯದ ಸಂದರ್ಶನವು ಮೇಲಿಂದ ಮೇಲೆ ಆಗುವದು.

೧೪) ಮಧ್ಯರಾತ್ರಿ ಹಾಗೂ ಮಧ್ಯಾಹ್ನ ಈ ಕಾಲದಲ್ಲಿ ರೋಗದ ತೀವ್ರತೆ ಹೆಚ್ಚುತ್ತದೆ.

೧೫) ಷಷ್ಠಿ, ಅಷ್ಟಮಿ, ನವಮಿ, ಚತುರ್ದಶಿ, ಪೂರ್ಣಿಮೆ, ಅಮಾವಾಸ್ಯೆ ಈ ತಿಥಿಗಳಲ್ಲಿಯೂ ಹಾಗೂ ಸೂರ್ಯ-ಚಂದ್ರರ ಗ್ರಹಣದ ಕಾಲದಲ್ಲಿಯೂ ರೋಗದ ತೀವ್ರತೆ ಹೆಚ್ಚಾಗಿರುತ್ತದೆ.

೧೬) ನಿತ್ಯ ಚಂದ್ರನು ಭರಣಿ, ಕೃತಿಕಾ, ಆರಿದ್ರಾ, ಆಶ್ಲೇಷ, ಮಘಾ, ಪೂರ್ವಾ, ಮೂಲಾ ಈ ನಕ್ಷತ್ರಗಳಲ್ಲಿದ್ದರೆ ರೋಗದ ಉಲ್ಬಣತೆ ಹೆಚ್ಚು.

೧೭) ರೋಗಿಗೆ ಗೋಚರೀ ಚಂದ್ರನು ೪, ೬, ೮, ೧೨ ನೆಯವನಾಗಿ ಬಂದಾಗ ರೋಗದ ತೀವ್ರತೆ ಹೆಚ್ಚಾಗಿರುತ್ತದೆ.

೧೮) ಮೇಷ, ಸಿಂಹ, ಧನು ಈ ರಾಶಿಯ ಜನರು ಅನೂಪದೇಶ (ಮಲ್ಲಾಡ) ದಲ್ಲಿದ್ದರೆ ಕೆಮ್ಮು, ನೆಗಡಿಗಳಿಂದ ಮೇಲಿಂದ ಮೇಲೆ ಬಳಲುವರು.

೧೯) ಮೇಷ, ಸಿಂಹ, ಧನು ಈ ರಾಶಿಯ ಜನರಿಗೆ ಒಣಕಜ್ಜಿ, ಮೈಮೇಲೆ ಗುಳ್ಳೆ ಮೊದಲಾದ ತ್ವಚೆ ರೋಗಗಳ ಭೀತಿ ಇರುತ್ತದೆ.

೨೦) ಮೇಷ, ಸಿಂಹ, ಧನು, ವೃಶ್ಚಿಕ, ಮಕರ ಈ ರಾಶಿಯ ಜನರಿಗೆ ಬ್ಲಡ್‌ಪ್ರೆಶರ್ (ರಕ್ತದ ಒತ್ತಡ) ದ ಭೀತಿ ಬಹಳ.

೨೧) ಮಿಥುನ, ತುಲಾ, ಕುಂಭ, ಮೇಷ, ಸಿಂಹ, ಧನು ಈ ರಾಶಿಯ ಜನರಿಗೆ ಹೃದಯವಿಕಾರದ ಭೀತಿ ಬಹಳ.

೨೨) ಶನಿಯು ಕರ್ಕದಲ್ಲಿಯೂ, ಚಂದ್ರನು ಮಕರದಲ್ಲಿಯೂ ಇದ್ದು ಮೀನ, ಕನ್ಯಾ ಲಗ್ನವಿದ್ದ ಜಾತಕನಿಗೆ ಜಲೋದರದ ಭೀತಿ ಬಹಳ.

೨೩) ಶನಿ, ಚಂದ್ರ, ಮಂಗಳರ ಯುತಿಯೋಗವು ಲಗ್ನ, ತೃತೀಯ, ಚತುರ್ಥ, ಸಪ್ತಮ, ಅಷ್ಟಮ, ದಶಮ ಈ ಸ್ಥಾನಗಳಲ್ಲಿದ್ದ ಜಾತಕನು ಜಲದಲ್ಲಿ ಮರಣಹೊಂದುವನು.

೨೪) ರವಿ, ಚಂದ್ರರು, ಕನ್ಯಾರಾಶಿಯಲ್ಲಿದ್ದು ಶನಿ, ಮಂಗಳರಿಂದ ದೃಷ್ಟಿಸಲ್ಪಟ್ಟ ಜಾತಕನು ಸ್ವಜನರಿಂದ ಕೊಲ್ಲಲ್ಪಡುವನು.

೨೫) ಚಂದ್ರ, ಮಂಗಳ, ಶನಿ, ರವಿ ಈ ಗ್ರಹಗಳ ಯುತಿಯೋಗವು ಲಗ್ನ, ಚತುರ್ಥ, ಅಷ್ಟಮ ಈ ಸ್ಥಾನಗಳಲ್ಲಿದ್ದರೆ ದುರ್ಮರಣ ಹೊಂದುವನು, ಇಲ್ಲವೆ ಅಪಘಾತಾದಿಗಳಿಂದ ಅಂಗವಿಕೃತನಾಗುವದು.

೨೬) ದ್ವಿಸ್ವಭಾವರಾಶಿಗಳಾದ ಮಿಥುನ, ಕನ್ಯಾ, ಧನು, ಮೀನ ಈ ಲಗ್ನಗಳಿದ್ದು, ಲಗ್ನದಲ್ಲಿ ರವಿ-ಶನಿಯರ ಯುತಿಯಿದ್ದು, ಲಗ್ನೇಶ ಹಾಗೂ ಚಂದ್ರರು ದುರ್ಬಲರಿದ್ದ ಜಾತಕನು ನೀರಿನಲ್ಲಿ, ಮಹಾಪೂರದಲ್ಲಿ (ಡೋಣಿ, ಹಡಗ ಮುಳುಗಿ) ಅಪಘಾತ ಹೊಂದುವ ಸಂಭವವಿದೆ.

೨೭) ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ಯಾವದೊಂದು ರಾಶಿಯಲ್ಲಿಯ ಚಂದ್ರನು ಶನಿ, ಮಂಗಳ, ರವಿಯರೊಂದಿಗೆ ಚತುರ್ಥ, ಲಗ್ನ, ಅಷ್ಟಮಗಳಲ್ಲಿದ್ದರೆ ಅಪಘಾತದಿಂದಾಗಲಿ, ಅಗ್ನಿಯಿಂದಾಗಲಿ ವಿದ್ಯುತ್ತಿನಿಂದಾಗಲಿ, ಗುಂಡಿನಿಂದಾಗಲಿ ಮರಣಹೊಂದುವನು.

೨೮) ಮೀನ ಲಗ್ನವಿದ್ದು, ಲಗ್ನದಲ್ಲಿ ರವಿಯೂ, ದ್ವಿತೀಯದಲ್ಲಿ ಶುಕ್ರನೂ ಇದ್ದು, ಶನಿ-ಚಂದ್ರ ಇಲ್ಲವೆ ಚಂದ್ರ-ಮಂಗಳರ ಯುತಿಯು ಸಪ್ತಮ ಇಲ್ಲವೆ ಅಷ್ಟಮದಲ್ಲಿದ್ದರೆ ಸ್ತ್ರೀ ಹೇತುವಿನಿಂದ ಮರಣಹೊಂದುವನು.

೨೯) ಕುಜನು ಸಪ್ತಮದಲ್ಲಿದ್ದು, ಶನಿ-ಚಂದ್ರ ಇಲ್ಲವೆ ಶನಿ-ರವಿ ಇವರು ಲಗ್ನದಲ್ಲಿದ್ದ ಜಾತಕನು ಮಶಿನರಿ (Machines)ಗಳಿಂದ ಮರಣ ಹೊಂದುವನು.

೩೦) ಚತುರ್ಥದಲ್ಲಿ ಕುಜನೂ ಸಪ್ತಮದಲ್ಲಿ ರವಿಯೂ, ದಶಮದಲ್ಲಿ ಶನಿಯೂ ಇದ್ದ ವ್ಯಕ್ತಿ ಕಾರಾಗೃಹದಲ್ಲಿ ಮರಣಹೊಂದುವನು ಅಥವಾ ರಾಜಕೀಯ ವ್ಯಕ್ತಿಗಳಿಂದ ಮರಣಹೊಂದುವನು.

೩೧) ದ್ವಿತೀಯದಲ್ಲಿ ಶನಿಯೂ, ಚತುರ್ಥದಲ್ಲಿ ಚಂದ್ರನೂ ಇದ್ದು, ಕುಜನು ದಶಮ ಇಲ್ಲವೆ ಅಷ್ಟಮದಲ್ಲಿದ್ದರೆ ಕ್ರಿಮಿ-ಕೀಟಕಗಳ ಕಡಿತದಿಂದ ಮರಣಹೊಂದುವನು.

೩೨) ಶನಿಯು ದ್ವಿತೀಯದಲ್ಲಿಯೂ, ಕುಜನು ಚತುರ್ಥದಲ್ಲಿಯೂ ಇದ್ದರೆ ಅಥವಾ ಶನಿಯು ಷಷ್ಠದಲ್ಲಿಯೂ ಕುಜನು ಅಷ್ಟಮದಲ್ಲಿಯೂ ಇದ್ದ ಜಾತಕನು ವಾಹನಗಳ ಅಪಘಾತಗಳಿಂದ ಮರಣ ಹೊಂದುವನು.

೩೩) ಶನಿ–ಮಂಗಳ, ಶನಿ–ಚಂದ್ರ, ರವಿ–ಶನಿ ಇವರ ಯುತಿ ಯೋಗವು ಲಗ್ನ, ಅಷ್ಟಮ, ವ್ಯಯದಲ್ಲಿದ್ದರೆ ಅಂಗವಿಹೀನನಾಗುವನು (A number of fractures).

೩೪) ದುರ್ಬಲ ಕುಜನು ಷಷ್ಠದಲ್ಲಿದ್ದು, ಷಷ್ಠಾಧೀಶನು ದುರ್ಬಲನಾಗಿ ಅಷ್ಟಮ, ವ್ಯಯದಲ್ಲಿದ್ದರೆ ವಯಸ್ಸಿನ ೧೨ನೆಯ ವರ್ಷದಲ್ಲಿ ಜ್ವರದಿಂದ ಗಂಡಾಂತರವಾಗುತ್ತದೆ.

೩೫) ಷಷ್ಠದಲ್ಲಿ ಚಂದ್ರನೂ, ಅಷ್ಟಮದಲ್ಲಿ ಶನಿಯೂ, ದ್ವಾದಶದಲ್ಲಿ ರವಿ, ರಾಹು, ಮಂಗಳರಲ್ಲಿ ಯಾರೊಬ್ಬರು ಇದ್ದರೆ ಪೀನಸರೋಗವುಂಟಾತ್ತದೆ.

೩೬) ನವಮದಲ್ಲಿ ಶನಿಯೂ, ತೃತೀಯದಲ್ಲಿ ಗುರುವೂ ಅಥವಾ ವ್ಯಯದಲ್ಲಿ ಗುರುವೂ, ಅಷ್ಟಮದಲ್ಲಿ ಶನಿಯೂ ಇದ್ದರೆ ಕೈಗೆ ಹೊಡೆತ ಬೀಳುತ್ತದೆ.

೩೭) ರಾಹು-ಶನಿ-ಬುಧರ ಯುತಿಯು ದಶಮದಲ್ಲಿದ್ದರೆ ಕೈಗೆ ಹೊಡೆತ ಬೀಳುತ್ತದೆ.

೩೮) ಷಷ್ಠದಲ್ಲಿ ಶನಿಯಿದ್ದು, ಅಷ್ಟಮದಲ್ಲಿ ಚಂದ್ರನಿದ್ದು, ಲಗ್ನೇಶ ದುರ್ಬಲನಿದ್ದ ಜಾತಕನು ಸದಾ ರೋಗಪೀಡಿತನಿರುತ್ತಾನೆ.

೩೯) ದ್ವಿತೀಯದಲ್ಲಿ ಶನಿಯಿದ್ದು, ದ್ವಿತಿಯೇಶ ಪಾಪಗ್ರಹಯುಕ್ತ, ಪಾಪಗ್ರಹದೃಷ್ಟ, ಪಾಪಗ್ರಹಮಧ್ಯದಲ್ಲಿದ್ದ ಜಾತಕನಿಗೆ ನಾಯಿ ಕಚ್ಚುತ್ತವೆ.

೪೦) ಕರ್ಕಲಗ್ನದ ಲಗ್ನದಲ್ಲಿ ರವಿಯಿದ್ದು, ಶನಿದೃಷ್ಟಿಯಿದ್ದರೆ ಮೂಲವ್ಯಾಧಿಯುಂಟಾಗುತ್ತದೆ.

೪೧) ರವಿ-ಚಂದ್ರ-ಶುಕ್ರರಲ್ಲಿ ಯಾರಿಬ್ಬರು ದ್ವಿತೀಯ ದ್ವಾದಶದಲ್ಲಿದ್ದರೆ ನೇತ್ರರೋಗ ಉಂಟಾಗುತ್ತದೆ.

೪೨) ಷಷ್ಠದಲ್ಲಿ ಚಂದ್ರ, ಅಥವಾ ಶುಕ್ರ ಅಥವಾ ಬುಧನಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟರೆ ಛರ್ದಿ ಹಾಗೂ ತೃಷ್ಣಾವಿಕಾರ ಬಹಳ ಉಂಟಾಗುತ್ತದೆ.

೪೩) ಕರ್ಕರಾಶಿಯ ರವಿಯು ಲಗ್ನ, ಚತುರ್ಥ, ಅಷ್ಟಮದಲ್ಲಿದ್ದು ಶನಿಯಿಂದ ದೃಷ್ಟಿಸಲ್ಪಟ್ಟರೆ ಮಲರೋಗದ ಭೀತಿ ಬಹಳ.

೪೪) ದಶಮದಲ್ಲಿ ಮಂಗಳನಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟರೆ ವಾತರಕ್ತವುಂಟಾಗುತ್ತದೆ.

೪೫) ಅಷ್ಟಮದಲ್ಲಿ ಗುರುವು ಪಾಪಗ್ರಹಯುಕ್ತನಾಗಿದ್ದರೆ ಆಮವಾತ ಉಂಟಾಗುತ್ತದೆ.

೪೬) ಸಿಂಹ ರಾಶಿಯ ಚಂದ್ರನು ಪಾಪಗ್ರಹಯುತನಾಗಿ ಲಗ್ನ, ಪಂಚಮ, ಷಷ್ಠ, ಅಷ್ಟಮ, ವ್ಯಯದಲ್ಲಿದ್ದರೆ ಉದರ ರೋಗದ ಭೀತಿ ಬಹಳ.

೪೭) ಮಂಗಳನಿಂದ ದೃಷ್ಟಿಸಲ್ಪಟ್ಟ ಮೀನರಾಶಿಯ ರವಿಯು ಲಗ್ನ ದಲ್ಲಿದ್ದರೆ ಅಥವಾ ವೃಶ್ಚಿಕ ಲಗ್ನದಲ್ಲಿ ಶುಕ್ರ–ಮಂಗಳರ ಯುತಿಯಿದ್ದರೆ ಅಥವಾ ವೃಷಭ ಇಲ್ಲವೆ ವೃಶ್ಚಿಕ ರಾಶಿಯ ಶನಿಯು ಷಷ್ಠದಲ್ಲಿದ್ದು, ಅಷ್ಟಮ ದಲ್ಲಿ ಚಂದ್ರನಿದ್ದರೆ ವೃಷಣವೃದ್ಧಿಯಾಗುತ್ತದೆ.

೪೮) ಮಿಥುನ ಅಥವಾ ಕನ್ಯಾರಾಶಿಯ ಲಗ್ನದಲ್ಲಿ ರವಿಯೋರ್ವ ನಿದ್ದು ಗುರುವಿನ ದೃಷ್ಟಿ ಲಗ್ನದಲ್ಲಿದ್ದರೆ ಉನ್ಮಾದ ಉಂಟಾಗುತ್ತದೆ.

೪೯) ಕರ್ಕರಾಶಿಯ ಶುಕ್ರನು ಲಗ್ನದಲ್ಲಿದ್ದರೆ ಉನ್ಮಾದವುಂಟಾ ಗುತ್ತದೆ.

೫೦) ದ್ವಿತೀಯ ಅಥವಾ ದ್ವಾದಶದಲ್ಲಿ ಶುಕ್ರನಿದ್ದರೆ ಅಥವಾ ಮಂಗಳನಿದ್ದರೆ ಅಥವಾ ಮೇಷ, ವೃಷಭ, ಕರ್ಕ ಈ ಲಗ್ನಗಳ ಜಾತಕರ ಲಗ್ನದಲ್ಲಿ ಚಂದ್ರನಿದ್ದರೆ ಬಧಿರತ್ವ ಇಲ್ಲವೆ ಕರ್ಣರೋಗವುಂಟಾಗುತ್ತದೆ.

೫೧) ಸಿಂಹರಾಶಿಯ ಚಂದ್ರನು ಲಗ್ನದಲ್ಲಿದ್ದರೆ ದಂತರೋಗ, ಭಸ್ಮಕ ರೋಗ ಅಥವಾ ಶೋಥವಿಕಾರ ಉಂಟಾಗುತ್ತದೆ (ಪಾಪಗ್ರಹ ದೃಷ್ಟಿಸಲ್ಪಟ್ಟ ಚಂದ್ರನಿಂದ.

೫೨) ಸಪ್ತಮದಲ್ಲಿ ಶನಿ–ರಾಹುವಿದ್ದರೆ ಮೂತ್ರರೋಗವುಂಟಾಗು ತ್ತದೆ.

೫೩) ಕರ್ಕರಾಶಿಯ ರವಿ–ಚಂದ್ರ ಇಲ್ಲವೆ ಚಂದ್ರ–ಮಂಗಳರ ಯುತಿ ಯೋಗವು ಲಗ್ನ, ಷಷ್ಠ, ಅಷ್ಟಮದಲ್ಲಿದ್ದರೆ ರಕ್ತಪಿತ್ತವುಂಟಾಗುತ್ತದೆ.

೫೪) ಜಲರಾಶಿಯ ರವಿ–ಮಂಗಳರು ಅಥವಾ ರವಿ–ಗುರು, ಗುರು–ಮಂಗಳ, ಗುರು–ಚಂದ್ರ ಇವರ ಯುತಿಯೋಗವು ಲಗ್ನ, ಷಷ್ಠ, ಅಷ್ಟಮ, ವ್ಯಯ, ದ್ವಿತೀಯಗಳಲ್ಲಿದ್ದರೆ ರಕ್ತಪಿತ್ತವುಂಟಾಗುತ್ತದೆ.

೫೫) ವೃಶ್ಚಿಕ ರಾಶಿಯ ಶನಿ–ರಾಹುವಿನ ಯುತಿಯು ಅಷ್ಟಮದಲ್ಲಿದ್ದರೆ ಮೂಲವ್ಯಾಧಿಯುಂಟಾಗುತ್ತದೆ.

೫೬) ಮೇಷ, ಲಗ್ನದ ವ್ಯಯ, ಷಷ್ಠ, ಅಷ್ಟಮದಲ್ಲಿ ಚಂದ್ರ-ಶನಿಯರ ಯುತಿಯಿದ್ದರೆ ಶ್ವಾಸ, ಕಾಸ, ರಾಜಯಕ್ಷ್ಮ, ಹೃದ್ರೋಗ, ಉನ್ಮಾದ ವಿಕಾರಗಳುಂಟಾಗುತ್ತವೆ.

ವಿ. ಸೂ. : — ಓದುಗರು ಮೇಲೆ ಕಾಣಿಸಿದ ಅನುಭವಸಿದ್ಧ ನಿಯಮಗಳನ್ನು ಪ್ರಯೋಗಮಾಡಿ ತಮ್ಮ ಅನುಭವಗಳನ್ನು ಸತ್ಯಶೋಧನೆಗಾಗಿ ನಮಗೆ ತಿಳಿಸಬೇಕಾಗಿ ವಿನಂತಿ.

— —

# ೬

# ಮುಹೂರ್ತಾದಿ ವಿಚಾರ

ರೋಗ ಗುಣವಾಗಬೇಕಾದರೆ ಔಷಧ ಸೇವನೆಯೋ, ಶಸ್ತ್ರಚಿಕಿತ್ಸೆಯೋ ಅರ್ಥಾತ್ ಔಷಧೋಪಚಾರ-ಶಸ್ತ್ರಚಿಕಿತ್ಸೆ ಬೇಕು. ಆದರೆ ರೋಗ ಗುಣಮುಖವಾಗುವುದು ಯಾವಾಗ ಎಂಬುದು ವೈದ್ಯಕೀಯ ಶಾಸ್ತ್ರದ ಪ್ರತಿಪಾದನೆ. ಆದರೆ ಜ್ಯೋತಿಷ್ಯ ಶಾಸ್ತ್ರದಂತೆ ಪ್ರತಿಯೊಂದು ಕ್ರಿಯೆಗೂ ಮುಹೂರ್ತವೇ ಪ್ರಾಮುಖ್ಯವಾದದ್ದಾಗುತ್ತದೆ. ಅಂತೆಯೇ ಈ ಅಧ್ಯಾಯದಲ್ಲಿ ಭಿನ್ನ ಭಿನ್ನ ರೋಗಗಳಿಗೆ ಯಾವ ಯಾವ ಮುಹೂರ್ತದಲ್ಲಿ ಔಷಧ ಸೇವನೆ ಮಾಡಿದರೆ, ಶಸ್ತ್ರಚಿಕಿತ್ಸೆ ಮಾಡಿದರೆ ರೋಗ ಗುಣವಾಗುವದೆಂದು ವಿವರಿಸಲಾಗಿದೆ. ಇದರಂತೆ ನಕ್ಷತ್ರ, ತಿಥಿ, ವಾರ, ಯೋಗಗಳ ಮೇಲೆ ರೋಗ ಪ್ರಾರಂಭವಾದರೆ ಕಾಡುವ ಕಾಲ ಹಾಗೂ ಪರಿಣಾಮಗಳನ್ನು ಸಹ ವಿವರಿಸಲಾಗಿದೆ. ಇದಲ್ಲದೆ ಮಾನವನಿಗೆ ರೋಗ ಉಂಟಾಗುವ (ಉದ್ಭವಿಸುವ) ಕಾಲ ಯಾವುದು ಎಂಬುದರ ಸಂಕ್ಷಿಪ್ತ ವಿವೇಚನೆಯೂ ಸಹ ಈ ಪ್ರಕರಣದಲ್ಲಿ ಅಡಗಿದೆ.

ಆಯುರ್ವೇದ ಶಾಸ್ತ್ರದ ಪ್ರಕಾರ ಭಿನ್ನ ಭಿನ್ನ ರೋಗಗಳಿಗೆ ಔಷಧ ತೆಗೆದುಕೊಳ್ಳುವ ಕಾಲ ಬೇರೆಬೇರೆಯಾಗಿರುತ್ತದೆ. ಉದಾಹರಣೆಗಾಗಿ: ಕೆಲವು ಔಷಧಗಳನ್ನು ಊಟದ ಪೂರ್ವದಲ್ಲಿ, ಊಟದ ನಂತರ, ಪ್ರಾತಃಕಾಲದಲ್ಲಿ, ಮಧ್ಯಾಹ್ನದಲ್ಲಿ, ಸಾಯಂಕಾಲದಲ್ಲಿ, ರಾತ್ರಿ ಕಾಲದಲ್ಲಿ, ಮಲಗುವ ಮೊದಲು, ಮೇಲಿಂದ ಮೇಲೆ, ಭೋಜನದ ಮಧ್ಯಂತರದಲ್ಲಿ, ಎರಡು ತುತ್ತುಗಳ ಮಧ್ಯದಕಾಲ, ಅನ್ನದ ಜೊತೆಗೆ ಮೊದಲಾದ ಹತ್ತು ಪ್ರಕಾರದ ಔಷಧ ಸೇವಿಸುವ ಕಾಲವನ್ನು ಹೇಳಲಾಗಿದೆ. ಆದರೆ ಜ್ಯೋತಿಷ್ಯಶಾಸ್ತ್ರದ ಪ್ರಕಾರ ಔಷಧ ಸೇವನೆಯನ್ನು ಯಾವಾಗ ಪ್ರಾರಂಭ ಮಾಡಬೇಕು? ಭಿನ್ನ ಭಿನ್ನ ರೋಗಗಳ ಔಷಧ ಸೇವಿಸುವ ಪ್ರಾರಂಭದ ಕಾಲವು ಬೇರೆ ಬೇರೆ ಇರುವದರಿಂದ ಆಯಾ ರೋಗಗಳ ನಿವಾರಣೆಗಾಗಿ ಔಷಧದ ಪ್ರಾರಂಭದ ಕಾಲವನ್ನು ಈ ಕೆಳಗಿನಂತೆ ಕೊಡಲಾಗಿದೆ.

ಸಾಮಾನ್ಯವಾಗಿ ಎಲ್ಲ ರೋಗಗಳಿಗೆ ಔಷಧದ ಪ್ರಾರಂಭವನ್ನು ಅಶ್ವಿನಿ, ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯ, ಉತ್ತರ, ಹಸ್ತಾ, ಉತ್ತರಾಷಾಢಾ, ಉತ್ತರಾಭಾದ್ರಪದ, ಚಿತ್ತಾ, ಸ್ವಾತಿ, ಅನುರಾಧಾ, ಶ್ರವಣಾ, ರೇವತಿ ಈ ನಕ್ಷತ್ರಗಳಲ್ಲಿ ವೈದ್ಯಕೀಯ ಸಲಹೆಯನ್ನಾಗಲಿ, ಔಷಧದ ಪ್ರಾರಂಭವನ್ನಾಗಲಿ ಮಾಡುವದರಿಂದ ರೋಗ ಬೇಗ ಗುಣಮುಖವಾಗುವದು.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಈ ಯಾವದೊಂದು ವಾರದಲ್ಲಿ ಔಷಧವನ್ನು ಪ್ರಾರಂಭಿಸಬೇಕು. ಚರ ಲಗ್ನದಲ್ಲಿ ಔಷಧ ತೆಗೆದುಕೊಂಡರೆ ರೋಗವು ಬೇಗ ಕಡಿಮೆಯಾಗುತ್ತದೆ.

ಭಿನ್ನ ಭಿನ್ನ ರೋಗಿಗಳಿಗೆ ಔಷಧ ಪ್ರಾರಂಭಮಾಡುವ ನಕ್ಷತ್ರ, ತಿಥಿ, ವಾರ, ಯೋಗಗಳು ಭಿನ್ನ ಭಿನ್ನವಿರುವದರಿಂದ ಅವುಗಳ ವಿವರಣೆ ಈ ಕೆಳಗಿನಂತೆ ಕೊಡಲಾಗಿದೆ :—

೧) ಯಾವದೇ ಬಗೆಯ ಸಾಂಸರ್ಗಿಕ ಬೇನೆಗಳಿಗೆ ಚತುರ್ಥಿ, ನವಮಿ, ಚತುರ್ದಶಿ ತಿಥಿಗಳಲ್ಲಿಯೂ, ರವಿವಾರದಲ್ಲಿಯೂ ಭರಣಿ, ಆರಿದ್ರಾ, ಅನುರಾಧಾ ನಕ್ಷತ್ರಗಳಲ್ಲಿಯೂ ಔಷಧ ತೆಗೆದುಕೊಳ್ಳುವದು ಹೆಚ್ಚು ಶ್ರೇಯಸ್ಕರವು.

೨) ಉಪದಂಶ, ಪರಮಾ, ಗರ್ಮಿ ಮೊದಲಾದ ವಿಕಾರಗಳಲ್ಲಿ ದ್ವಿತೀಯಾದಲ್ಲಿ ಔಷಧ ಪ್ರಾರಂಭಿಸುವದು ಹೆಚ್ಚು ಶ್ರೇಯಸ್ಕರವು.

೩) ಸಂಧಿವಾತ, ಆಮವಾತ, ಗೃಧ್ರಸೀವಾತ, ವಾತರಕ್ತ ಮೊದಲಾದ ವಿಕಾರಗಳಲ್ಲಿ ಅಶ್ವಿನೀ, ಆಶ್ಲೇಷಾ, ಮೂಲಾ, ಪುಷ್ಯಾ ನಕ್ಷತ್ರಗಳಲ್ಲಿಯೂ ಅಷ್ಟಮಿ, ನವಮಿ ತಿಥಿಗಳಲ್ಲಿಯೂ ಶುದ್ಧ ಷಷ್ಠಿ, ಶುದ್ಧ ಏಕಾದಶಿ ತಿಥಿಗಳಲ್ಲಿಯೂ, ಗುರುವಾರದಲ್ಲಿಯೂ ಔಷಧವನ್ನು ಪ್ರಾರಂಭಿಸುವದು ಹೆಚ್ಚು ಶ್ರೇಯಸ್ಕರವು.

೪) ಪಿತ್ತವಿಕಾರಗಳಿಗೆ ಔಷಧ ಸೇವನೆಯ ಪ್ರಾರಂಭವನ್ನು ದ್ವಿತೀಯಾ, ಷಷ್ಠಿ, ದ್ವಾದಶಿ ತಿಥಿಗಳಲ್ಲಿಯೂ, ಪುನರ್ವಸು, ಸ್ವಾತಿ, ರೇವತಿ ನಕ್ಷತ್ರಗಳಲ್ಲಿಯೂ ಗುರು ಇಲ್ಲದ ಶುಕ್ರವಾರಗಳಲ್ಲಿಯೂ ಪ್ರಾರಂಭಿಸಬೇಕು.

೫) ವಾತ ಹಾಗೂ ಮೇದಾಧಿಕ್ಯ ರೋಗದಲ್ಲಿ ಭರಣಿ, ಕೃತ್ತಿಕಾ, ಆರಿದ್ರಾ ನಕ್ಷತ್ರಗಳಲ್ಲಿ, ಚರರಾಶಿಯಲ್ಲಿ ಪ್ರಾರಂಭಿಸಿದರೆ ಹೆಚ್ಚು ಹಿತಕರ.

೬) ಗನೋರಿಯಾ ರೋಗದಲ್ಲಿ ಚತುರ್ಥಿ, ನವಮಿ, ಚತುರ್ದಶಿ ತಿಥಿಗಳಲ್ಲಿಯೂ, ಬುಧವಾರದಲ್ಲಿಯೂ ಔಷಧ ಸೇವನೆಯನ್ನು ಪ್ರಾರಂಭ ಮಾಡಬೇಕು.

೭) ತ್ವಚೆ ರೋಗಗಳಾದ ಇಸಬು, ಗಜಕರ್ಣ ಮೊದಲಾದ ರೋಗ ಗಳಲ್ಲಿ ಔಷಧ ಸೇವನೆಯ ಪ್ರಾರಂಭವನ್ನು ಷಷ್ಠಿ, ಅಷ್ಟಮಿ, ನವಮಿ, ಚತುರ್ಥಿ, ಚತುರ್ದಶಿ ತಿಥಿಗಳಲ್ಲಿಯೂ ರವಿವಾರ, ಮಂಗಳವಾರ, ಶನಿವಾರ ಗಳಲ್ಲಿಯೂ ಮೃಗಶಿರ, ಪುಷ್ಯ, ಚಿತ್ತಾ, ಕೃತ್ತಿಕಾ, ಉತ್ತರಾ, ಅನುರಾಧಾ, ಉತ್ತರಾಷಾಢಾ, ಧನಿಷ್ಠಾ, ಉತ್ತರಾಭಾದ್ರಪದ ನಕ್ಷತ್ರಗಳಲ್ಲಿಯೂ ಮೇಷ, ಸಿಂಹ, ವೃಶ್ಚಿಕ ಈ ಲಗ್ನಗಳಲ್ಲಿಯೂ ಔಷಧ ಸೇವನೆ ಮಾಡಬೇಕು. ರೋಗದ ಕಿರುಕಳ ಅಲ್ಪವಿದ್ದರೆ ಭರಣಿ, ಕೃತ್ತಿಕಾ, ಆಶ್ಲೇಷ, ಮಘಾ, ಜ್ಯೇಷ್ಠಾ ನಕ್ಷತ್ರಗಳಲ್ಲಿಯೂ ದ್ವಾದಶಿ ತಿಥಿಯಲ್ಲಿಯೂ, ಮಂಗಳವಾರ ದಲ್ಲಿಯೂ ಪ್ರಾರಂಭಿಸಬೇಕು.

೮. ಕ್ಷಯರೋಗಕ್ಕಾಗಿ ಔಷಧ ಸೇವನೆಯ ಪ್ರಾರಂಭವನ್ನು ಶುಭ ನಕ್ಷತ್ರ, ಶುಭವಾರ, ಶುಭ ದಿನಗಳಲ್ಲಿ ಮಾಡಬೇಕು.

## ಶಸ್ತ್ರಕ್ರಿಯೆಗಳಿಗಾಗಿ ಉತ್ತಮ ಮುಹೂರ್ತಗಳು

ಯಾವುದೇ ಶಸ್ತ್ರಕ್ರಿಯೆಗೆ ಮಂಗಳವಾರ ಉತ್ತಮವಿರುತ್ತದೆ. ರೋಗಿಗೆ ಗೋಚರಿಯಿಂದ ಮಂಗಳನು ಶುಭ (ಅನುಕೂಲದಾಯಕ) ನಿರಬೇಕು. ಅಂದರೆ ಶಸ್ತ್ರಕ್ರಿಯೆ ಯಶಸ್ವಿಯಗುತ್ತದೆ.

ಆರಿದ್ರಾ, ಆಶ್ಲೇಷಾ, ಮೂಲಾ ಈ ನಕ್ಷತ್ರಗಳೂ ಚತುರ್ಥಿ, ನವಮಿ, ಚತುರ್ದಶಿ ತಿಥಿಗಳೂ ಮೇಷ, ಕರ್ಕ, ಕನ್ಯಾ, ಲಗ್ನಗಳೂ ಸೋಮವಾರ, ರವಿವಾರ, ಬುಧವಾರ, ಗುರುವಾರ, ಶುಕ್ರವಾರ ಈ ವಾರಗಳೂ ಶಸ್ತ್ರಕ್ರಿಯೆ ಗಾಗಿ ಶುಭಕರವಿರುತ್ತವೆ.

ಶಸ್ತ್ರಕ್ರಿಯೆಯ ಸಮಯದಲ್ಲಿ ಗೋಚರಿಯಿಂದ ರವಿಯು ಚಂದ್ರನ ರಾಶಿಯಲ್ಲಿದ್ದರೆ ಹೆಚ್ಚು ಅನುಕೂಲ.

ಗೋಚರಿಯಿಂದ ರವಿ, ಗುರು, ಶಕ್ರರು ಶುಭವಿರಬೇಕು.

ಸ್ಥಿರರಾಶಿಯ ಲಗ್ನಗಳು ಶಸ್ತ್ರಕ್ರಿಯೆಗೆ ಅಶುಭವು.

ದ್ವಿಸ್ವಭಾವದ ರಾಶಿಯ ಲಗ್ನಗಳು ಶಸ್ತ್ರಕ್ರಿಯೆಗೆ ಶುಭವಿದ್ದರೂ ವಿಲಂಬದಿಂದ ಗುಣಮುಖ ಮಾಡುತ್ತವೆ.

ಚರರಾಶಿಯ ಲಗ್ನಗಳು ಶಸ್ತ್ರಕ್ರಿಯೆಗೆ ಹೆಚ್ಚು ಶುಭಕರವು.

ಶಸ್ತ್ರಚಿಕಿತ್ಸೆಯ ವೇಳೆಗೆ ಜನ್ಮಕುಂಡಲಿಯಲ್ಲಿಯ ಅಷ್ಟಮಸ್ಥಾನದ ರಾಶಿಯು ಶಸ್ತ್ರಕ್ರಿಯೆಯ ಕಾಲಕ್ಕೆ ಲಗ್ನದ ರಾಶಿಯಾಗಬಾರದು.

## ಶಸ್ತ್ರಚಿಕಿತ್ಸೆಯ ಮೇಲೆ ಚಂದ್ರನ ಪರಿಣಾಮ

ಚಂದ್ರನು ಪೃಥ್ವಿಗೆ ಅತ್ಯಂತ ಸಮೀಪದ ಗ್ರಹವಿರುವನಲ್ಲದೆ ಪೃಥ್ವಿಯ ಮೇಲಿನ ಜಲದ ಮೇಲೆಯೂ (ಸಮುದ್ರದ ಮೇಲೆಯೂ) ಆಧಿಪತ್ಯವುಳ್ಳವನಾಗಿದ್ದಾನೆ. ಇದಲ್ಲದೆ ಔಷಧ ಹಾಗೂ ವನಸ್ಪತಿಯ ದ್ರವರೂಪಕ್ಕೂ ಚಂದ್ರನೇ ಕಾರಕನು. ಆದುದರಿಂದ ವೈದ್ಯಶಾಸ್ತ್ರಕ್ಕೆ ಚಂದ್ರನ ಮಹತ್ತ್ವ ಬಹಳಷ್ಟು ಇರುತ್ತದೆ.

ಗೋಚರಿಯ ಚಂದ್ರನ ಪರಿಭ್ರಮಣ ದೃಷ್ಟಿಯೋಗ, ಮೂಲಗ್ರಹದ ಮೇಲಿನಿಂದಾಗುವ ಯೋಗ ಮೊದಲಾದ ಶುಭಾಶುಭ ಯೋಗಗಳು ರೋಗಿಯ ರೋಗದ ಹೆಚ್ಚು ಕಡಿಮೆ ತಿಳಿಸುವ ಉಷ್ಣತಾಮಾಪಕ (Thermometer) ದಂತೆ ಇರುತ್ತವೆ. ಆದುದರಿಂದ ಚಂದ್ರನ ಪರಿ-ಭ್ರಮಣವು ಆಯಾ ರಾಶಿಗಳ ಮೇಲಿಂದಾಗುವಾಗ ಯಾವ ಶಸ್ತ್ರಚಿಕಿತ್ಸೆಯು ಶುಭಾಶುಭವಿರುತ್ತದೆಂಬುದನ್ನು ಈ ಕೆಳಗ ಕೊಡಲಾಗಿದೆ.

೧. ನೇತ್ರಚಿಕಿತ್ಸೆಯಲ್ಲಿ ಹಾಗೂ ಹಲ್ಲು ಕೀಳುವಾಗ ಚಂದ್ರನ ಗೋಚರಿಯ ಪರಿಭ್ರಮಣವು ಮೇಷರಾಶಿಯಿಂದ ಆಗಬಾರದು.

೨. ಚಂದ್ರನು ವೃಷಭ ರಾಶಿಯಲ್ಲಿ ಪರಿಭ್ರಮಿಸುತ್ತಿದ್ದಾಗ ಕುತ್ತಿಗೆಯ

ಮೇಲಿನ ಶಸ್ತ್ರಚಿಕಿತ್ಸೆ (ಕುತ್ತಿಗೆಯಲ್ಲಿರುವ ಗಂಟು), ಟಾನ್ಸಿಲ್ ಶಸ್ತ್ರಚಿಕಿತ್ಸೆಗಳನ್ನು ಮಾಡಬಾರದು.

೩. ಅಪೆಂಡಿಸೈಟಿಸ್ (Appendicitis) ಹಾಗೂ ಹೊಟ್ಟೆಯಲ್ಲಿಯ ಯಾವದೇ ಶಸ್ತ್ರಚಿಕಿತ್ಸೆಯನ್ನು ಚಂದ್ರನು ಕರ್ಕ ರಾಶಿಯಲ್ಲಿ ಪರಿಭ್ರಮಣ ಮಾಡುವಾಗ ಮಾಡಬಾರದು.

೪. ಬೆನ್ನುಹುರಿ, ಬೆನ್ನು, ಹೃದಯ ಈ ಭಾಗಗಳ ಶಸ್ತ್ರಚಿಕಿತ್ಸೆಯನ್ನು ಚಂದ್ರನು ಸಿಂಹರಾಶಿಯಲ್ಲಿ ಪರಿಭ್ರಮಣ ಮಾಡುವಾಗ ಮಾಡಬಾರದು.

೫. ಬಸ್ತಿಯ ಶಸ್ತ್ರಚಿಕಿತ್ಸೆಯನ್ನು ಚಂದ್ರನು ತುಲಾ ರಾಶಿಯಲ್ಲಿ ಪರಿಭ್ರಮಣ ಮಾಡುತ್ತಿದ್ದಾಗ ಮಾಡಬಾರದು.

೬. ಮೂಲವ್ಯಾಧಿ ಭಗಂದರ, ಪಿಶಾರ, ಮೂತ್ರಾಶ್ಮರಿ ಜನನೇಂದ್ರಿಯ ಸಂಬಂಧದ ವ್ಯಾಧಿ, ಗರ್ಭಾಶಯ, ವೃಷಣ, ಹರ್ನಿಯಾ, ಗುದ ಈ ಭಾಗದ ಹಾಗೂ ರೋಗಗಳ ಶಸ್ತ್ರಚಿಕಿತ್ಸೆಯನ್ನು ಚಂದ್ರನು ವೃಶ್ಚಿಕ ರಾಶಿಯಲ್ಲಿ ಪರಿಭ್ರಮಿಸುವಾಗ ಮಾಡಬಾರದು.

೭. ತೊಡೆಯ ಭಾಗದ ಶಸ್ತ್ರಚಿಕಿತ್ಸೆಯನ್ನು ಚಂದ್ರನು ಧನುರಾಶಿಯ ಮೇಲಿಂದ ಪರಿಭ್ರಮಿಸುತ್ತಿದ್ದಾಗ ಮಾಡಬಾರದು.

೮. ಮೊಳಕಾಲಿನ ಮೇಲಿನ ಶಸ್ತ್ರಚಿಕಿತ್ಸೆಯನ್ನು ಚಂದ್ರನು ಮಕರ ರಾಶಿಯ ಮೇಲೆ ಪರಿಭ್ರಮಿಸುತ್ತಿರುವಾಗ ಮಾಡಬಾರದು.

೯. ಹಿಮ್ಮಡ ಹಾಗೂ ಮೀನಗಂಡಗಳ ಮೇಲಿನ ಶಸ್ತ್ರಚಿಕಿತ್ಸೆಯನ್ನು ಚಂದ್ರನು ಕುಂಭರಾಶಿಯಲ್ಲಿ ಪರಿಭ್ರಮಿಸುವಾಗ ಮಾಡಬಾರದು.

೧೦. ಪಾದ ಹಾಗೂ ಪಾದದ ಬೊಟ್ಟುಗಳ ಮೇಲಿನ ಶಸ್ತ್ರಚಿಕಿತ್ಸೆಯನ್ನು ಚಂದ್ರನು ಮೀನರಾಶಿಯಲ್ಲಿ ಪರಿಭ್ರಮಿಸುವಾಗ ಮಾಡಬಾರದು.

೧೧. ಚಂದ್ರನು ಗೋಚರಿಯಿಂದ ೪. ೬, ೮, ೧೨ನೆಯವನಾಗಿ ಬಂದಾಗ ಯಾವದೇ ಶಸ್ತ್ರಚಿಕಿತ್ಸೆಯನ್ನು ಮಾಡಬಾರದು.

೧೨. ಶಸ್ತ್ರಚಿಕಿತ್ಸೆಯ ಕಾಲದಲ್ಲಿ ಗೋಚರೀ ಚಂದ್ರನ ಯುತಿ ಹಾಗೂ

ಪ್ರತಿಯೋಗಗಳು ರವಿ, ರಾಹು, ಮಂಗಳ, ಶನಿ, ಕೇತು ಇವರೊಂದಿಗೆ ಇರಕೂಡದು.

೧೩. ಗೋಚರಿಯಿಂದ ಚಂದ್ರನ ಪರಿಭ್ರಮಣವು ಪೃಥ್ವಿ ಹಾಗೂ ವಾಯು ರಾಶಿಗಳ ಮೇಲಿಂದಾಗುವ ರಕ್ತಸ್ರಾವ (ಶಸ್ತ್ರಚಿಕಿತ್ಸೆಯ ಕಾಲಕ್ಕೆ) ವಿಶೇಷವಾಗುವದಿಲ್ಲ.

೧೪. ಶಸ್ತ್ರಚಿಕಿತ್ಸೆಯ ಕಾಲಕ್ಕೆ ಚಂದ್ರನ ಪರಿಭ್ರಮಣವು ಅಗ್ನಿ ಹಾಗೂ ಜಲರಾಶಿಯಲ್ಲಿ ಆಗುತ್ತಿದ್ದರೆ ರಕ್ತಸ್ರಾವ ಬಹಳವಾಗುತ್ತದೆ.

೧೫. ಪೂರ್ಣಮಾ ಅಮಾವಾಸ್ಯೆ, ಗ್ರಹಣಕಾಲ ಇವು ಶಸ್ತ್ರಚಿಕಿತ್ಸೆಗೆ ನಿಷಿದ್ಧವಿರುತ್ತವೆ.

## ರೋಗನಿವಾರಣೆ ಎಂದು ?

ನಮ್ಮ ಅನೇಕ ಪೃಚ್ಛಕರು ಅರ್ಥಾತ್ ರೋಗಿಗಳು ಮೇಲಿಂದ ಮೇಲೆ ಕೇಳುವ ಪ್ರಶ್ನೆಯೆಂದರೆ "ರೋಗನಿವಾರಣೆ ಎಂದು ?". ರೋಗ ಪೂರ್ಣ ಗುಣಮುಖವಾಗಲು ಎಷ್ಟು ಅವಧಿ ಬೇಕಾಗುತ್ತದೆ ಎಂಬುದೇ ಇವರ ಪ್ರಶ್ನೆಯ ತಾತ್ಪರ್ಯ. ಇಂಥ ಪ್ರಶ್ನೆಗೆ ಉತ್ತರ ಕೊಡುವ ಪೂರ್ವದಲ್ಲಿ ರೋಗ ಪ್ರಾರಂಭವಾದ ತಿಥಿ, ವಾರ, ನಕ್ಷತ್ರಗಳನ್ನು ಪರಿಶೀಲಿಸಬೇಕು. ಏಕೆಂದರೆ ಯಾವುದೊಂದು ಘಟನೆ, ಸಂಗತಿ, ಕಾರ್ಯಗಳ ಸಫಲತೆ, ವಿಫಲತೆ, ವಿಲಂಬ, ತೀವ್ರತೆ, ಸರಳತೆ, ಅಡೆತಡೆ ಇವುಗಳಿಗಾಗಿ ಆಯಾ ಸಂಗತಿಗಳು ಪ್ರಾರಂಭವಾದ ದಿನದ ವೈಶಿಷ್ಟ್ಯವನ್ನರಿಯಬೇಕಾಗುತ್ತದೆ. ಅಂತೆಯೇ ಇಂಗ್ಲೀಷಿನಲ್ಲಿ "Well begun is half done" ಎನ್ನುತ್ತಾರೆ. ಹಾಗೆಯೇ ಯಾವುದೊಂದು ರೋಗದ ವಿಕಾರದ ವಿಕೃತಿಗಳ ತೀವ್ರತೆ, ಮಂದತೆ, ಪೂರ್ಣ ಗುಣವಾಗುವಿಕೆ ಮೊದಲಾದವುಗಳನ್ನು ತಿಳಿಯಲು ಆಯಾ ರೋಗ ಪ್ರಾರಂಭವಾದ ನಕ್ಷತ್ರ, ತಿಥಿ, ವಾರಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಇವೆಲ್ಲವುಗಳನ್ನು ಹೇಗೆ ಪರಿಶೀಲಿಸಬೇಕೆಂಬುವದನ್ನು ಈ ಕೆಳಗೆ ಕೊಡಲಾಗಿದೆ.

**ನಕ್ಷತ್ರಗಳ ಮೇಲಿಂದ:** - ಭಿನ್ನ ಭಿನ್ನ ನಕ್ಷತ್ರಗಳ ಮೇಲೆ ರೋಗ ಪ್ರಾರಂಭವಾದರೆ ಭಿನ್ನಭಿನ್ನ ಪರಿಣಾಮಗಳುಂಟಾಗುತ್ತವೆ. ಅವು ಈ ಕೆಳಗಿನಂತಿವೆ.

೧. ಅಶ್ವಿನೀ ನಕ್ಷತ್ರದ ಮೇಲೆ ಯಾವದೊಂದು ರೋಗ ಪ್ರಾರಂಭವಾದರೆ ಒಂದೆರಡು ದಿನಗಳಲ್ಲಿ ಗುಣಮುಖವಾಗುವದು. ಹೆಚ್ಚೆಂದರೆ ೯,೧೦, ೨೫ ದಿವಸಗಳ ವರೆಗೆ ಪೀಡಿಸುವದು. ಈ ನಕ್ಷತ್ರದಲ್ಲಿ ಪ್ರಾರಂಭವಾದ ರೋಗಗಳು ತೀವ್ರ ಸ್ವರೂಪ (ವಿಕೋಪ) ಹೊಂದಲಾರವು.

೨. ಭರಣಿ ನಕ್ಷತ್ರದ ಮೇಲೆ ಬೇನೆ ಪ್ರಾರಂಭವಾದರೆ ಬೇನೆ ಕಡಿಮೆಯಾಗಲು ವಿಲಂಬವಾಗುತ್ತದೆ. ಹಾಗೂ ಬೇನೆಯಲ್ಲಿ ಅನೇಕ ವಿಕಾರ-ದೋಷ (Complication), ಲಕ್ಷಣ, ಉಪದ್ರವಗಳು ಹುಟ್ಟಿಕೊಳ್ಳುತ್ತವೆ. ಆದರೆ ಜನ್ಮ ಚಂದ್ರನಿಂದ ಗೋಚರಿಯಿಂದ ಗುರು, ಶನಿ, ಮಂಗಳರು ಶುಭರಿದ್ದರೆ ಐದೇ ದಿನದಲ್ಲಿ ಕಡಿಮೆಯಾಗುತ್ತದೆ. ಇಲ್ಲದಿದ್ದರೆ ೧೧, ೨೧, ೨೭ ದಿವಸಗಳ ವರೆಗೆ ಅಥವಾ ಒಂದು ತಿಂಗಳ ವರೆಗೆ ಪೀಡಿಸುತ್ತದೆ. ಅಥವಾ ಮೃತ್ಯುವುಂಟಾಗುತ್ತದೆ.

೩. ಕೃತ್ತಿಕಾ ನಕ್ಷತ್ರದ ಮೇಲೆ ರೋಗ ಪ್ರಾರಂಭವಾದರೆ ರೋಗದ ತೀವ್ರತೆ ಹೆಚ್ಚಾಗುತ್ತದೆ, ಅರ್ಥಾತ್ ಬಹು ಬೇಗ ಉಲ್ಬಣಹೊಂದುತ್ತದೆ. ಆದರೆ ರೋಗದ ಉದ್ವಿಗ್ನತೆ ಮೊದಲಿನ ವಾರದಲ್ಲಿ ಪ್ರಖರವಾಗುತ್ತದೆ. ಆ ಬಳಿಕ ೯, ೧೦, ೨೧, ೨೮ ದಿವಸಗಳ ವರೆಗೆ ಹಿಡಿಯುತ್ತದೆ. ಈ ನಕ್ಷತ್ರದಲ್ಲಿ ಬೇನೆ ಬಂದವರು ಬದುಕುವದು ಕಡಿಮೆ.

೪. ರೋಹಿಣಿ ನಕ್ಷತ್ರದ ಮೇಲೆ ಬೇನೆ ಪ್ರಾರಂಭವಾದರೆ ಕಡಿಮೆಯಾಗಲು ೭, ೯, ೧೦, ೨೯ ದಿವಸಗಳು ಬೇಕಾಗುತ್ತವೆ. ಇಲ್ಲವೆ ಮೂರೇ ದಿವಸಗಳಲ್ಲಿ ಕಡಿಮೆಯಾಗುತ್ತದೆ.

೫. ಮೃಗಶಿರಾ ನಕ್ಷತ್ರದಲ್ಲಿ ರೋಗ ಉತ್ಪನ್ನವಾದರೆ ೫, ೯, ೩೦ ದಿವಸಗಳ ವರೆಗೆ ಕಾಡಾಟವಿರುತ್ತದೆ.

೬. ಆರಿದ್ರಾ ನಕ್ಷತ್ರದ ಮೇಲೆ ವ್ಯಾಧಿ ಉಂಟಾದರೆ ಮೊದಲಿನ ಐದು ದಿವಸಗಳ ವರೆಗೆ ಬಹಳ ತಾಪದಾಯಕವಿರುತ್ತದೆ, ಆ ಬಳಿಕ ೧೦, ೩೦, ೪೫ ದಿವಸಗಳ ವರೆಗೆ ಕಾಡಾಟವಿರುತ್ತಡೆ. ಆದರೆ ಅಪಾಯಕಾರಕ ವಿರುವದಿಲ್ಲ.

೭. ಪುನರ್ವಸು ನಕ್ಷತ್ರದ ಮೇಲೆ ರೋಗವುಂಟಾದರೆ ಅಪಾಯ ಕಾರಕವಿರುವದಿಲ್ಲ. ೭, ೯ ದಿವಸಗಳ ವರೆಗೆ ಕಾಡಾಟವಿರುತ್ತದೆ.

೮. ಪುಷ್ಯ ನಕ್ಷತ್ರ ಮೇಲೆ ರೋಗವುಂಟಾದರೆ ಅಪಾಯವಿರುವ ದಿಲ್ಲ. ೭, ೮ ದಿವಸಗಳಲ್ಲಿ ಕಡಿಮೆಯಾಗುತ್ತದೆ.

೯. ಆಶ್ಲೇಷಾ ನಕ್ಷತ್ರ ಇದು ಕ್ರೂರ ನಕ್ಷತ್ರವಿರುವದರಿಂದ ಈ ನಕ್ಷತ್ರದಲ್ಲಿ ವ್ಯಾಧಿಯುಂಟಾದರೆ ಮೃತ್ಯುವನ್ನು ಆಹ್ವಾನಿಸಿದಂತೆಯೇ. ಮೊದ ಲಿನ ೭ ದಿವಸಗಳಲ್ಲಿ ರೋಗ ಸುಧಾರಿಸಬಹುದು, ಇಲ್ಲದಿದ್ದರೆ ೨೦, ೩೦ ದಿವಸಗಳ ವರೆಗೆ ಕಾಡಾಟವಾಗಬಹುದು. ಕೊನೆಗೆ ಮೃತ್ಯು ಬರುತ್ತದೆ.

೧೦. ಮಘಾ ನಕ್ಷತ್ರವೂ ಸಹ ಆಶ್ಲೇಷಾ ನಕ್ಷತ್ರದಂತೆ ಅಶುಭಕರ ವೇನೋ ನಿಜ. ಆದರೆ ಈ ನಕ್ಷತ್ರದಲ್ಲಿ ಪ್ರಾರಂಭವಾದ ಬೇನೆಯು ಮೊದ ಲಿನ ೧೦ ದಿವಸಗಳಲ್ಲಿ ಕಡಿಮೆಯಾಗಬಹುದು. ಇಲ್ಲದಿದ್ದರೆ ಮತ್ತೆ ಮಘಾ ನಕ್ಷತ್ರಕ್ಕೆ ಚಂದ್ರ ಬಂದಾಗ ಅಂದರೆ ೨೭, ೨೮ ದಿವಸಗಳ ವರೆಗೆ ಕಾಡಾಟ ವಿರುತ್ತದೆ. ೩೦, ೩೫ ದಿವಸಗಳ ವರೆಗೆ ಹಾಸಿಗೆ ಹಿಡಿದ ರೋಗಿಗಳನ್ನು ನೋಡಿದ ಅನುಭವವಿದೆ.

೧೧. ಪೂರ್ವಾ ಈ ನಕ್ಷತ್ರದ ಮೇಲೆ ರೋಗವುಂಟಾದರೆ ೮, ೧೫, ೩೦ ದಿವಸಗಳ ವರೆಗೆ ಕಾಡಾಟವಿರುತ್ತದೆ. ಅಥವಾ ಒಂದು ವರ್ಷದ ವರೆಗೆ ಪೀಡಿಸುತ್ತದೆ.

೧೨. ಉತ್ತರಾ ಇದು ಶುಭ ನಕ್ಷತ್ರವಿರುವದರಿಂದ ಈ ನಕ್ಷತ್ರದ ಮೇಲೆ ವ್ಯಾಧಿ ಉಂಟಾದರೆ ೫, ೭, ೧೫, ೨೭ ದಿವಸಗಳ ವರೆಗೆ ಪೀಡೆ ಇದ್ದು ಬಳಿಕ ಕಡಿಮೆಯಾಗುತ್ತದೆ.

೧೩. ಹಸ್ತಾ ನಕ್ಷತ್ರದ ಮೇಲೆ ರೋಗ ಉಂಟಾದರೆ ಅಪಾಯ ಒದಗುವದಿಲ್ಲ. ೭, ೮, ೯, ೧೫ ದಿವಸಗಳ ವರೆಗೆ ಕಾಡುತ್ತದೆ.

೧೪. ಚಿತ್ತಾ ನಕ್ಷತ್ರ ಕ್ರೂರವಿರುವದರಿಂದ ಅಪಾಯಕಾರಿ ಇರುತ್ತದೆ. ಈ ನಕ್ಷತ್ರದಲ್ಲಿ ರೋಗವುಂಟಾದರೆ ೮, ೧೧, ೧೫ ದಿವಸಗಳ ವರೆಗೆ ಕಾಡಾಟ ವಿರುತ್ತದೆ, ಅಥವಾ ಅಪಾಯಕರವಿರುತ್ತದೆ.

೧೫. ಸ್ವಾತಿ ಈ ನಕ್ಷತ್ರದಲ್ಲಿ ರೋಗವುಂಟಾದರೆ ೧, ೨, ೩, ೪, ೫ ದಿವಸಗಳ ವರೆಗೆ ಕಾಡುತ್ತದೆ. ಅಥವಾ ೧೦ ತಿಂಗಳ ವರೆಗೂ ಕಾಡಿಸುತ್ತದೆ, ಅಥವಾ ಮೃತ್ಯುವುಂಟಾಗುತ್ತದೆ.

೧೬. ವಿಶಾಖಾ ನಕ್ಷತ್ರದ ಮೇಲೆ ರೋಗವುಂಟಾದರೆ ೮, ೧೫, ೨೦, ೩೦ ದಿವಸಗಳ ವರೆಗೆ ಕಾಡಾಟವಿರುತ್ತದೆ.

೧೭. ಅನುರಾಧಾ ನಕ್ಷತ್ರದ ಮೇಲೆ ರೋಗವುಂಟಾದರೆ ೧೦ ರಾತ್ರಿ ಇಲ್ಲವೆ ೨೮ ರಾತ್ರಿಗಳ ವರೆಗೆ ಪೀಡೆ ಇರುತ್ತದೆ.

೧೮. ಜ್ಯೇಷ್ಠಾ ನಕ್ಷತ್ರವು ಕ್ರೂರವಿರುವದರಿಂದ ಅಪಾಯಕಾರಕವು. ಈ ನಕ್ಷತ್ರದ ಮೇಲೆ ರೋಗವುಂಟಾದರೆ ೧೫, ೨೦, ೩೦ ದಿವಸಗಳ ವರೆಗೆ ಕಾಡಾಟ ಇಲ್ಲವೆ ಮೃತ್ಯು ಉಂಟಾಗುತ್ತದೆ.

೧೯. ಮೂಲಾ ನಕ್ಷತ್ರವೂ ಸಹ ಕ್ರೂರವಿರುತ್ತದೆ. ಆದ್ದರಿಂದ ಅಪಾಯಕಾರಕವು. ಈ ನಕ್ಷತ್ರದ ಮೇಲೆ ವ್ಯಾಧಿ ಉಂಟಾದರೆ ೯, ೧೫, ೨೦ ರಾತ್ರಿಗಳ ವರೆಗೆ ಪೀಡೆ ಅಥವಾ ಮೃತ್ಯು.

೨೦. ಪೂರ್ವಾಷಾಢಾ ನಕ್ಷತ್ರದ ಮೇಲೆ ರೋಗವುಂಟಾದರೆ ೧೫, ೨೦ ದಿವಸಗಳ ವರೆಗೆ ಕಾಡಾಟವಿರುತ್ತದೆ. ಅಥವಾ ೨, ೩, ೬ ತಿಂಗಳ ವರೆಗೆ ಕಾಡಾಟವಿರುತ್ತದೆ. ಅಥವಾ ಮೃತ್ಯು ಉಂಟಾಗುತ್ತದೆ.

೨೧. ಉತ್ತರಾಷಾಢಾ ನಕ್ಷತ್ರದ ಮೇಲೆ ರೋಗವುಂಟಾದರೆ ೨೦, ೩೦, ೪೫ ದಿವಸಗಳ ವರೆಗೆ ಕಾಡಾಟವಿರುತ್ತದೆ.

೨೨, ಶ್ರವಣಾ ಇದು ಸೌಮ್ಯ ನಕ್ಷತ್ರವಿರುವದರಿಂದ ಅಪಾಯ ಕಾರಕವಿರುವದಿಲ್ಲ. ಆದರೆ ಈ ನಕ್ಷತ್ರದಲ್ಲಿ ಉಂಟಾದ ರೋಗಗಳು ೮, ೧೦, ೧೧, ೨೫, ೬೦ ದಿವಸಗಳ ವರೆಗೆ ಕಾಡಿಸುತ್ತವೆ.

೨೩. ಧನಿಷ್ಠಾ ನಕ್ಷತ್ರವು ಪಂಚಕ ನಕ್ಷತ್ರವಿರುವದರಿಂದ ಅಶುಭ ಕರವು. ಈ ನಕ್ಷತ್ರದಲ್ಲಿ ರೋಗವುಂಟಾದರೆ ೧೦, ೧೩, ೧೫, ೩೦ ದಿವಸ ಗಳ ವರೆಗೆ ರೋಗಿಯು ಹಾಸಿಗೆ ಹಿಡಿಯುವನು. ಅಥವಾ ಮರಣ ಹೊಂದುವನು.

೨೪. ಶತತಾರಾ ನಕ್ಷತ್ರವೂ ಸಹ ಧನಿಷ್ಠಾ ನಕ್ಷತ್ರದಂತೆ ಪಂಚಕ ವಿದ್ದರೂ ಕೂಡ ಕ್ರೂರವಿರುವದಿಲ್ಲ. ಈ ನಕ್ಷತ್ರದಲ್ಲಿ ಉಂಟಾದ ರೋಗವು ೧೧, ೧೨ ದಿವಸಗಳ ವರೆಗೆ ಕಾಡುತ್ತದೆ.

೨೫. ಪೂರ್ವಾಭಾದ್ರಪದ ಇದೂ ಸಹ ಪಂಚಕ ನಕ್ಷತ್ರವಿದ್ದು ಅಪಾಯಕಾರಕವಿರುತ್ತದೆ. ಈ ನಕ್ಷತ್ರದಲ್ಲಿ ಉಂಟಾದ ಬೇನೆ ೮, ೧೦ ದಿವಸಗಳ ವರೆಗೆ ಅಥವಾ ೨–೩ ತಿಂಗಳುಗಳ ವರೆಗೆ ಪೀಡಿಸುತ್ತದೆ ಅಥವಾ ಮೃತ್ಯುವುಂಟಾಗುತ್ತದೆ.

೨೬. ಉತ್ತರಾಭಾದ್ರಪದ ಈ ನಕ್ಷತ್ರವು ಸೌಮ್ಯ ನಕ್ಷತ್ರವಿರುವದ ರಿಂದ ಪಂಚಕವಿದ್ದರೂ ಅಪಾಯದಾಯಕವಿರುವದಿಲ್ಲ. ಈ ನಕ್ಷತ್ರದಲ್ಲಿ ಬಂದ ಬೇನೆಯದು ೭, ೮, ೧೦, ೧೫, ೪೫ ದಿವಸಗಳ ವರೆಗೆ ಕಾಡಾಟ ವಿರುತ್ತದೆ.

೨೭. ಪಂಚಕ ನಕ್ಷತ್ರದ ಕೊನೆಯ ನಕ್ಷತ್ರವಾದ ರೇವತಿ ನಕ್ಷತ್ರವೂ ಸಹ ಅಪಾಯಕಾರಕವಿರುತ್ತದೆ. ಈ ನಕ್ಷತ್ರದಲ್ಲಿ ಉದ್ಭವಿಸಿದ ಬೇನೆಯು ೭, ೮, ೧೦, ೨೮, ದಿವಸಗಳ ವರೆಗೆ ಕಾಡಿಸುತ್ತದೆ, ಅಥವಾ ಅಪಾಯ ವಿರುತ್ತದೆ.

## ವಾರಗಳ ಮೇಲಿಂದ

ರವಿವಾರ, ಮಂಗಳವಾರ, ಶನಿವಾರ ಈ ಯಾವದೇ ಮೂರು ವಾರ ಗಳಲ್ಲಿ ರೋಗ ಆರಂಭವಾದರೆ ರೋಗ ಮುಖವಾಗಲು ದೀರ್ಘಾವಧಿ ಹತ್ತುತ್ತದೆ. ಉಳಿದ ಯಾವದೇ ವಾರದಲ್ಲಿ ರೋಗ ಪ್ರಾರಂಭವಾದರೆ ಅಶುಭಕರ ಘಟನೆಗಳು ಜರುಗದೆ ರೋಗ ಬೇಗ ಗುಣಮುಖವಾಗುತ್ತದೆ.

## ತಿಥಿಗಳ ಮೇಲಿಂದ

ಚತುರ್ಥಿ, ಅಷ್ಟಮಿ, ನವಮಿ, ಚತುರ್ದಶಿ, ಅಮಾವಾಸ್ಯೆ ಹಾಗೂ ಶುದ್ಧ ದ್ವಿತೀಯಾ ಈ ಯಾವುದೊಂದು ತಿಥಿಯ ಮೇಲೆ ರೋಗದ ಉತ್ಪ ತ್ತಿಯು ಅಶುಭದಾಯಕವು;

## ಯೋಗಗಳ ಮೇಲಿಂದ

ನಿರ್ದಿಷ್ಟವಾದ ತಿಥಿ, ನಕ್ಷತ್ರ, ವಾರಗಳಲ್ಲಿ ರೋಗದ ಉತ್ಪತ್ತಿಯಾದರೆ ಅದು ಅಶುಭದಾಯಕವಿದ್ದು ರೋಗ ಗುಣಮುಖವಾಗಲೂ ಸಹ ದೀರ್ಘಾವಧಿ ಹತ್ತುತ್ತದಲ್ಲದೆ ಇಂಥ ರೋಗದಲ್ಲಿ ಅನೇಕ ಲಕ್ಷಣಗಳು, ವಿಕಾರಗಳು, ಉಪದ್ರವಗಳೂ ಸಹ ಹುಟ್ಟಿಕೊಳ್ಳುತ್ತವೆ. ಬೇರೆ ಬೇರೆ ಯೋಗಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

| ವಾರ | ತಿಥಿ | ನಕ್ಷತ್ರ |
|---|---|---|
| ೧. ಮಂಗಳವಾರ | ಪಂಚಮಿ | ಆರಿದ್ರಾ |
| ೨. ಬುಧವಾರ | ತೃತೀಯಾ | ಉತ್ತರಾಷಾಢಾ |
| ೩. ಗುರುವಾರ | ಷಷ್ಠಿ | ಶತತಾರಾ |
| ೪. ಶುಕ್ರವಾರ | ಅಷ್ಟಮಿ | ಅಶ್ವಿನಿ |
| ೫. ಶನಿವಾರ | ನವಮಿ | ಪೂರ್ವಾಷಾಢಾ |
| ೬. ರವಿವಾರ | ದ್ವಾದಶಿ | ಮಘಾ |
| ೭. ಸೋಮವಾರ | ಏಕಾದಶಿ | ವಿಶಾಖಾ |
| ೮. ರವಿವಾರ | ಚತುರ್ದಶಿ | ಆರಿದ್ರಾ |
| ೯. ಮಂಗಳವಾರ | ನವಮಿ | ಆಶ್ಲೇಷಾ |
| ೧೦. ಶನಿವಾರ | ಚತುರ್ದಶಿ | ಮಘಾ |

ಹೀಗೆ ಮೇಲ್ಕಂಡ ನಿರ್ದಿಷ್ಟವಾದ ವಾರ, ತಿಥಿ, ನಕ್ಷತ್ರಗಳ ಮೇಲೆ ಯಾವುದೊಂದು ರೋಗವು ಉತ್ಪನ್ನವಾದರೆ ಅಶುಭದಾಯಕವಿರುತ್ತದೆ.

ನಿರ್ದಿಷ್ಟವಾದ ವಾರ ನಕ್ಷತ್ರಗಳಲ್ಲಿ ಮಾತ್ರ ಯಾವುದೊಂದು ರೋಗವು ಉಂಟಾದರೆ ಆ ರೋಗ ತೀವ್ರ ಉಲ್ಬಣವಾಗುತ್ತದೆ. ಆದರೆ ಅಶುಭದಾಯಕ ಮಾತ್ರ ಇರುವದಿಲ್ಲ. ಅದನ್ನು ಈ ಕೆಳಗಿನಂತೆ ಕೊಡಲಾಗಿದೆ.

| ವಾರ | ನಕ್ಷತ್ರ |
|---|---|
| ೧. ರವಿವಾರ | ೧. ಅನುರಾಧಾ ಇಲ್ಲವೆ ಭರಣಿ |
| ೨. ಸೋಮವಾರ | ೨. ಆರಿದ್ರಾ ಇಲ್ಲವೆ ಉತ್ತರಾಷಾಢಾ |
| ೩. ಮಂಗಳವಾರ | ೩. ಮಘಾ ಇಲ್ಲವೆ ಶತತಾರಕಾ |

| | |
|---|---|
| ೪. ಬುಧವಾರ | ೪. ಅಶ್ವಿನಿ ಇಲ್ಲವೆ ವಿಶಾಖಾ |
| ೫. ಗುರುವಾರ | ೫. ಮೃಗಶಿರ ಇಲ್ಲವೆ ಜ್ಯೇಷ್ಠಾ |
| ೬. ಶುಕ್ರವಾರ | ೬. ಆಶ್ಲೇಷಾ ಶ್ರವಣಾ |
| ೭. ಶನಿವಾರ | ೭. ಹಸ್ತಾ ಇಲ್ಲವೆ ಪೂರ್ವಾಭಾದ್ರಪದ |

ಮೇಲ್ಕಂಡ ಈ ನಿರ್ದಿಷ್ಟವಾದ ವಾರ, ನಕ್ಷತ್ರಗಳ ಯೋಗದ ಮೇಲೆ ಬೇನೆ ಉದ್ಭವಿಸಿದರೆ ಬೇನೆಗಳು ಬಹಳ ದಿನಗಳ ವರೆಗೆ ಪೀಡೆಯನ್ನುಂಟು ಮಾಡುತ್ತವೆ.

## ರೋಗವು ಎಂದು ಬರುತ್ತದೆ?

ರೋಗವು ಎಂದು ಬರುತ್ತದೆ ? ಯಾವ ಯಾವ ರೋಗವಿಕಾರಗಳು ಯಾವಾಗ ಕಾಡುತ್ತವೆ ? ಯಾವ ವಯಸ್ಸಿನಲ್ಲಿ ಯಾವ ರೋಗದಿಂದ ಶಾರೀರಿಕ ಪೀಡೆ, ಮಾನಸಿಕ ವಿಕಾರ, ಅಸ್ವಸ್ಥತೆಗಳುಂಟಾಗುತ್ತವೆ ? ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರ ಕೊಡುವದೆಂದರೆ ಪ್ರತ್ಯೇಕವಾದ ಸ್ವತಂತ್ರ ವಾದ ಪುಸ್ತಕದಷ್ಟು ವಿವೇಚಿಸಬೇಕಾಗುತ್ತದೆ. ಇವುಗಳ ವಿವರಣೆಯನ್ನು ಈ ಪುಸ್ತಕ ಎರಡನೆಯ ಭಾಗದಲ್ಲಿ ಕೊಡಲಾಗುವದು. ಪ್ರಸ್ತುತ ಈ ಪ್ರಕರಣದಲ್ಲಿ ಸಂಕ್ಷಿಪ್ತವಾಗಿ ಕೊಡಲಾಗಿದೆ.

ಗೋಚರೀ ಗ್ರಹಗಳ ಪರಿಭ್ರಮಣದಿಂದ ರೋಗಗಳು ನಿರ್ಮಾಣ ವಾಗುತ್ತವೆ. ಅವುಗಳ ವಿವರಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

**ರವಿ :—** ರವಿಯು ಗೋಚರಿಯಿಂದ ೧-೪-೮-೧೨ ನೆಯನವನಾಗಿ ಬಂದಾಗ ಶಾರೀರಿಕ ಪೀಡೆ ಹಾಗೂ ರೋಗ ನಿರ್ಮಾಣ ಮಾಡುವನು.

**ಚಂದ್ರ :—** ಚಂದ್ರನು ಗೋಚರಿಯಿಂದ ೪-೬-೮-೧೨ನೆಯನವನಾಗಿ ಬಂದಾಗ ಶಾರೀರಿಕ ಹಾಗೂ ಮಾನಸಿಕ ಅಸ್ವಸ್ಥತೆಯನ್ನು ಕೊಡುವನು, ಮತ್ತು ರೋಗದ ಉಲ್ಬಣತೆ ಹೆಚ್ಚುವದು.

**ಮಂಗಳ :—** ಮಂಗಳನು ಗೋಚರಿಯಿಂದ ೧-೪-೮-೧೨ ನೆಯವ ನಾಗಿ ಬಂದಾಗ ರೋಗ ನಿರ್ಮಾಣ ಮಾಡುವನು. ಹಾಗೂ ದೈಹಿಕ ಪೀಡೆ ಕೊಡುವನು. ಮತ್ತು ಶಸ್ತ್ರಚಿಕಿತ್ಸೆ ಮಾಡಿಕೊಳ್ಳುವ ಪ್ರಸಂಗ ತರುವನು.

**ಬುಧ :—** ಬುಧನು ಗೋಚರಿಯಿಂದ ೬–೮–೧೨ ನೆಯವನಾಗಿ ಬಂದಾಗ ಶಾರೀರಿಕ ಹಾಗೂ ಮಾನಸಿಕ ಅಸ್ವಸ್ಥತೆಯನ್ನುಂಟುಮಾಡುವನು.

**ಗುರು :—** ಗುರು ಗೋಚರಿಯಿಂದ ೪–೬–೮–೧೨ ನೆಯವನಾಗಿ ಬಂದಾಗ ದೈಹಿಕ ಪೀಡೆ ಹಾಗೂ ಅಶಕ್ತತೆಯನ್ನುಂಟುಮಾಡುವನು.

**ಶುಕ್ರ :—** ಶುಕ್ರ ೬–೮ ನೆಯವನಾಗಿ ರೋಗ ನಿರ್ಮಾಣಮಾಡುವನು.

**ಶನಿ :—** ಸಾಡೇಸಾತಿಯಲ್ಲಿ ರೋಗ ನಿರ್ಮಾಣಮಾಡುವನು.

**ರಾಹು-ಕೇತು :** ೧–೪–೭–೮–೧೨ ನೆಯವರಾಗಿ ರಾಹು–ಕೇತುಗಳು ಬಂದರೆ ಶಾರೀರಿಕ ಪೀಡೆಯನ್ನು ಕೊಡುವರು.

ಮೂಲ ಜಾತಕದಲ್ಲಿ ಲಗ್ನ, ಷಷ್ಠ, ಅಷ್ಟಮ, ದ್ವಾದಶ ಈ ಸ್ಥಾನಗಳ ಸ್ಥಾನಾಧೀಶರು (ಲಗ್ನೇಶ, ಷಷ್ಠೇಶ, ಅಷ್ಟಮೇಶ, ದ್ವಾದಶೇಶ) ದೂಷಿತರೂ, ದುರ್ಬಲರೂ ಇದ್ದು ಇವರ ಮಹರ್ದಶೆ, ಅಂತರ್ದಶೆಯಲ್ಲಿ ಶಾರೀರಿಕ ಪೀಡೆಯುಂಟಾಗುತ್ತದೆ.

ಲಗ್ನ, ಷಷ್ಠ, ಅಷ್ಟಮ, ವ್ಯಯ ಈ ಸ್ಥಾನಗಳಲ್ಲಿ ದೂಷಿತ, ದುರ್ಬಲವಿರುವ ಗ್ರಹಗಳ ದಶ, ಅಂತರ್ದಶೆಯಲ್ಲಿಯೂ ರೋಗಗಳು ಬರುತ್ತವೆ.

**ವಿಶೇಷ ಸೂಚನೆ:—** ಯಾವ ಗ್ರಹಗಳು ಗೋಚರಿಯಿಂದ ಬಂದಾಗ ಯಾವ ರೋಗ ಸಂಭವಿಸುತ್ತವೆ ಹಾಗೂ ಯಾವ ಗ್ರಹಗಳ ದಶ, ಅಂತರ್ದಶೆಯಲ್ಲಿ ಯಾವ ಯಾವ ರೋಗಗಳು ಬರುತ್ತವೆ ಎಂಬುದರ ವಿವರಣೆಯನ್ನು ಈ ಗ್ರಂಥದ ಎರಡನೆಯ ಭಾಗದಲ್ಲಿ ಕೊಡಲಾಗುವದು.

